ಶ್ರೀ ಕೇಶವದೇವಾಲಯದ ಮುಖದ್ವಾರ



ಶ್ರೀ ಚೆನ್ನಕೇಶವ

# ಅನ್ತಃಪುರಗೀತೆ

ಡಿ. ವಿ. ಜಿ.





ಕಾವ್ಯಾಲಯ : ಪ್ರಕಾಶಕರು
ಮೈಸೂರು

# ಮುನ್ನುಡಿ

"ಬೇಲೂರಿನ ಶಿಲಾ ಬಾಲಿಕೆಯರು" ಎಂಬ ಪದ್ಯಾವಳಿ ನನ್ನ "ನಿವೇದನ" ಪುಸ್ತಕದಲ್ಲಿ ಪ್ರಕಟವಾಗಿ (೧೯೨೪) ಇಂದಿಗೆ ಸುಮಾರು ೨೬ ವರ್ಷ ಗಳಾಗಿವೆ. ಅಲ್ಲಿಂದೀಚೆಗೆ ಆಗಾಗ ಬರೆದುವಾಗಿ ೧೫-೨೦ ವರ್ಷಗಳ ಹಿಂದಿನಿಂದ ಹಳೆಯ ಕಾಗದದ ಕಟ್ಟುಗಳಲ್ಲಿ ನಿದ್ರಿಸುತ್ತಿದ್ದ ಈ "ಅನ್ತಃಪುರ ಗೀತೆಯ" ಪ್ರಬಂಧಗಳು ಈಗ ಹೀಗೆ ಹೊರಕ್ಕೆ ಬಂದಿರಲು ಶ್ರೀಮಾನ್ ಚಿದಂಬರಂ ಅವರ ಉತ್ಸಾಹ ಮುಖ್ಯಕಾರಣ. ಒಂದು ದಿನ ಯಾವುದೋ ಮಾತುಕಥೆಯ ಪ್ರವಾಹದ ಮಧ್ಯೆ ಅವರಾಡಿದ ಸ್ನೇಹವಚನದಿಂದ ನನ್ನ ಮನಸ್ಸು ಬಿಗಿತಪ್ಪಿದಾಗ ಈ ನನ್ನ ಗುಟ್ಟಿನ ಕೆಲಸವನ್ನು ಕುರಿತು ಬಾಯಿಬಿಟ್ಟೆ. ಅದನ್ನವರು ಪಟ್ಟಾಗಿ ಹಿಡಿದು ಪ್ರಕಟನೆಯ ಭಾರವನ್ನೆಲ್ಲ ತಾವು ವಹಿಸಿಕೊಳ್ಳುವುದಾಗಿ ಹೇಳಿ ಪ್ರೋತ್ಸಾಹಿಸಿದರು. ನಾನು ಒಪ್ಪಿಬಿಟ್ಟೆ.

ಶ್ರೀ ಚಿದಂಬರಂ ಹೇಳಿದ್ದನ್ನು ನಡಸಿದ್ದಾರೆ; ಪರಿಷ್ಕಾರಕಾರ್ಯದಲ್ಲಿ ಸಹಕರಿಸಿದ್ದಾರೆ; ಅಚ್ಚಿನ ಕರಡುಗಳನ್ನು ತಿದ್ದಿದ್ದಾರೆ; ಅಕಾರಾದಿ ಪಟ್ಟಿಕೆಗಳನ್ನು ರಚಿಸಿದ್ದಾರೆ; ಪುಸ್ತಕವನ್ನು ಈ ರೂಪಕ್ಕೆ ತರಲು ಅನೇಕ ಬಗೆಗಳಲ್ಲಿ ಶ್ರಮಿಸಿದ್ದಾರೆ.

ಈ ಗೀತೆಗಳಿಗೆ ಜೀವಾಧಾರ ಪ್ರಾಯಗಳಾದ ಚಿತ್ರಪಟಗಳಿಗಾಗಿ ಅನೇಕ ಮಂದಿ ಮಿತ್ರರಿಗೆ ಋಣಿಯಾಗಿದ್ದೇನೆ. ಅವರಲ್ಲಿ ಮೊದಲನೆಯವರು ಮೈಸೂರು ಸಂಸ್ಥಾನದ ನಿವೃತ್ತ ಮಂತ್ರಿಗಳು ಶ್ರೀಮಾನ್ ಎಂ. ಎ. ಶ್ರೀನಿವಾಸನ್ ಅವರು. ಕೊಂಚಕಾಲದ ಉಪಯೋಗಕ್ಕಾಗಿ ಅವರು ಬಹು ಕೃಪೆಯಿಂದ ಸೊಗಸಾದ ಛಾಯಾಪಟಗಳನ್ನು ತರಿಸಿಕೊಟ್ಟರು.

ಈಗ ಇಲ್ಲಿ ಪ್ರಕಟವಾಗಿರುವ ಸುಮಾರು ೫೧ ತುಂಬುಪುಟದ ಛಾಯಾ ಚಿತ್ರಗಳಿಗಾಗಿ ಮೈಸೂರು ಸರಕಾರಕ್ಕೂ ಅದರ ಪ್ರಾಚೀನಾನ್ವೇಷಣ (ಆರ್ಕಿಯೊಲಾಜಿಕಲ್) ಶಾಖೆಗೂ ಆ ಶಾಖೆಯ ಅಧಿಕಾರಿಗಳಿಗೂ ನಾನು ಅತ್ಯಂತ ಕೃತಜ್ಞತೆಯಿಂದ ವಂದನೆಗಳನ್ನರ್ಪಿಸುತ್ತೇನೆ. ಅವರು ಚಿತ್ರಗಳನ್ನೂ 'ಶಾಂತಲಾ-ವಿಷ್ಣುವರ್ಧನ' ಪಡಿಯಚ್ಚನ್ನೂ ಒದಗಿಸಿ ಅನುಮತಿಕೊಟ್ಟು ಉಪಕರಿಸಿದ್ದಾರೆ.

ಬೇಲೂರಿನ ಶ್ರೀ ಚೆನ್ನಕೇಶವ ದೇವಾಲಯದ ವರ್ಣನೆಯನ್ನೂ ಅದರ ಕಟ್ಟಡದ ಚರಿತ್ರೆಯನ್ನೂ ತಿಳಿದುಕೊಳ್ಳಬಯಸುವವರು ಈ ಕೆಳಗೆ ಹೇಳಿರುವ ಗ್ರಂಥಗಳನ್ನು ನೋಡಬಹುದು ; ಅವು ಇಂಗ್ಲಿಷಿನಲ್ಲಿವೆ :—

*The Kesava Temple at Belur*—By R. Narasimhachar (No. II, Mysore Archaeological Series, 1919);
*Report of the Mysore Archaeological Department*, 1931;
*A Guide to Belur*—(*Govt. Publication*) 1943.

ಎಷ್ಟು ಓದಿದರೂ ನೋಡಿದ್ದಕ್ಕೆ ಸಮನಾಗದು. ಹೋಗಿ ನೋಡಬೇಕು ; —ತೆರೆದ ಕಣ್ಣಿಂದ ನೋಡಬೇಕು.

ಈ ಪುಸ್ತಕದಲ್ಲಿಯ ಹಾಡುಗಳಿಗಾಗಿ ಸೂಚಿಸಿರುವ ರಾಗಗಳನ್ನು ಸರಿ ನೋಡಿ ತಾಳ ನಿಷ್ಕರ್ಷೆಮಾಡಿಕೊಟ್ಟಿರುವವರು ವೈಣಿಕ ವಿದ್ವಾನ್ ಶ್ರೀ ಎಲ್. ರಾಜಾರಾವ್, ಬಿ.ಎಸ್ ಸಿ., ಅವರು. ಅವರ ಕೃಪೆ ಸಹಕಾರಗಳಿಗಾಗಿ ಅವರನ್ನು ಮನಃಪೂರ್ವಕವಾಗಿ ವಂದಿಸುತ್ತೇನೆ.

ಹೆಚ್ಚಾಗಿ ಸಂಗೀತ ಪರಿಶ್ರಮವಿಲ್ಲದವರು ಕೂಡ ಈ ಹಾಡುಗಳನ್ನು ಹಾಡಲನುಕೂಲಿಸಬೇಕೆಂದು ಅವುಗಳಿಗೆ ಬಳಕೆಯ ರಾಗಗಳನ್ನು ಪಯೋಗಿಸಿ ಸುಲಭವಾದ ಧಾಟಿಗಳನ್ನು ಇರಿಸಿದೆ. ಇಲ್ಲಿ ಸೂಚಿಸದೆ ಇರುವ ರಾಗಗಳನ್ನೂ ಹಾಡಬಲ್ಲವರು ಅವರವರ ಅಭಿರುಚಿಗೆ ತಕ್ಕಂತೆ ಈ ಕೃತಿಗಳಿಗೆ ರಾಗ ಜೋಡಿಸಿ ಹಾಡಿಕೊಳ್ಳಬಹುದಾಗಿದೆ.

ಬೇಲೂರಿನ ಶ್ರೀ ಚೆನ್ನಕೇಶವ ಸನ್ನಿಧಿಯ ಆಗಮಿಕರತ್ನ ಶ್ರೀ ಮುತ್ತು ಭಟ್ಟರವರು ಶಿಲ್ಪಕೃತಿಗಳ ಸ್ವಾರಸ್ಯ ವಿವರಣೆಯಿಂದ ಸಹಾಯ ಕೊಟ್ಟಿದ್ದಾರೆ ಮತ್ತು ಇತರ ರೀತಿಗಳಲ್ಲಿ ಉಪಕಾರಮಾಡಿದ್ದಾರೆ. ಶ್ರೀ ನಿಟ್ಟೂರು ಶ್ರೀನಿವಾಸ ರಾಯರವರು ಒಂದು ಸಲ ಯಾತ್ರಾನುಕೂಲತೆಯನ್ನೊದಗಿಸಿಯೂ ಶ್ರೀ ಪಾಣ್ಯಂ ಶ್ರೀನಿವಾಸರಾಯರವರು ಛಾಯಾ ಗ್ರಹಣಕ್ಕಾಗಿ ಪರಿಶ್ರಮಿಸಿಯೂ ಉಪಕರಿಸಿದ್ದಾರೆ.

ಹೀಗೆ ಬಹುಮಂದಿ ಮಿತ್ರರ ಉಪಕಾರದಿಂದ ಸಿದ್ಧವಾಗಿರುವುದು ಈ ಕೃತಿ. ಇದಕ್ಕೆ ಇನ್ನು ಬೇಕಾಗಿರುವುದು ಮಹಾಜನರ ಕೃಪಾವಲೋಕನ.

ಬಸವನಗುಡಿ, ಬೆಂಗಳೂರು, ಡಿ. ವಿ. ಜಿ.
ಜನವರಿ ೧೯೫೦.

# ವಿಷಯ ಸೂಚಿಕೆ

(ಚಿತ್ರ ಪದ್ಯ ಗೀತ ಸಂಖ್ಯೆಗಳು ಪುಟಗಳವು)

ಶ್ರೀ ಚೆನ್ನಕೇಶವ

# ಅನ್ತಃಪುರಗೀತೆ

---

## ನಾಂದಿ

ಶ್ರೀಮತ್ತ್ರೈಲೋಕ್ಯ ಪೂಜ್ಯಾಯ |
ಸರ್ವ ಕರ್ಮಸು ಸಾಕ್ಷಿಣೇ ||
ಫಲದಾಯ ನಮೋ ನಿತ್ಯಂ |
ಕೇಶವಾಯ ಶಿವಾಯ ಚ || ೧

ಜಯತಿ ಧರಣಿ ಲೋಕೋತ್ತಂಸಿತಾತ್ಮೀಯ ಪಾದಃ |
ಚತುರ ವಿಬುಧಗೋಷ್ಠೀ ಪ್ರೌಢವಾಣೀ ವಿನೋದಃ ||
ಸಕಲ ಭರತವಿದ್ಯಾಹೃದ್ಯ ಗಂಭೀರ ಭಾವಃ |
ವಿಪುಲ ವಿಜಯಲಕ್ಷ್ಮೀ ವಲ್ಲಭೋ ವಿಷ್ಣುದೇವಃ || ೨

ವಿಷ್ಣುರ್ಜಿಷ್ಣುರ್ಮಹೀಪಾಲಃ |
ಪಾಲಿತಾಖಿಲ ಭೂತಲಃ ||
ದೇವದೇವೇಶ ವಿಜಯ |
ನಾರಾಯಣಮಚೀಕರತ್ || ೩

ಶಾನ್ತಿಕೃತ್ಸರ್ವ ಭೂತಾನಾಂ |
ಪ್ರತಿಷ್ಠಾ ವಿಷ್ಣುಕಾಂತಯಾ ||
ಚೆನ್ನಕೇಶವ ದೇವಸ್ಯ |
ಶಾನ್ತಿದೇವ್ಯಾ ಕೃತೋತ್ತಮಾ || ೪

---

**(೧) ಬೇಲೂರು ಶಾಸನ 58, 71 (ಕ್ರಿ.ಶ. 1117); (೨) ಅದೇ; (೩) ಶ್ರೀ ಮೂಲಕೇಶವ ವಿಗ್ರಹ ಪೀಠದ ಶಾಸನ, ಬೇಲೂರು 254; (೪) ಶ್ರೀ ಕಪ್ಪೆ ಚೆನ್ನಿಗರಾಯ ವಿಗ್ರಹ ಪೀಠದ ಶಾಸನ, ಬೇಲೂರು 275.**

"\. . . . ಪರಬ್ರಹ್ಮಸ್ವರೂಪನುಂ ಅತಿಪ್ರಸನ್ನನುಂ ಚೆನ್ನನುಮೆನಿಪ ಶ್ರೀಮದ್ವಿಜಯ ನಾರಾಯಣದೇವರಂ ಶ್ರೀಮದ್ವಿಷ್ಣುವರ್ಧನ ಪೊಯ್ಸಳ ದೇವರ್ ಸದ್ಭಕ್ತಿಯಿಂ ಸುಪ್ರತಿಷ್ಠಿತಂ ಮಾಡಿ ಶಕವರ್ಷ ಸಾಸಿರದ ಮೂವತ್ತೊಂಭತ್ತನೆಯ ಹೇವಿಳಂಬಿ ಸಂವತ್ಸರದ ಚೈತ್ರ ಶುದ್ಧ ಪಂಚಮೀ ವಡ್ಡವಾರ. ." ‖ ೫

ಭಜಾಮ್ಯಹಂ ಶ್ರೀವಸುಧಾಸಮೇತಂ
ಭಸ್ಮಾಸುರಧ್ವಂಸಕಮಿಂದುವಕ್ತ್ರಂ |
ಯೋಷಾಕೃತಿಂ ಬಿಭ್ರದಮುಂಬುಜಾಕ್ಷಂ
ಶ್ರೀಕೇಶವಂ ದಿವ್ಯಮನಂತರೂಪಂ ‖ ೬

ಯಂ ಶೈವಾಸ್ಸಮುಪಾಸತೇ ಶಿವ ಇತಿ
ಬ್ರಹ್ಮೇತಿ ವೇದಾಂತಿನೋ |
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ
ಕರ್ತೇತಿ ನೈಯಾಯಿಕಾಃ ‖
ಅರ್ಹಂಶ್ಚೇತಿ ಚ ಜೈನಶಾಸನ ಮತಾಃ
ಕರ್ಮೇತಿ ಮೀಮಾಂಸಕಾಃ |
ಸೋಽಯಂ ವೋ ವಿದಧಾತು ವಾಂಛಿತಫಲಂ
ಶ್ರೀಕೇಶವೇಶಸ್ಸದಾ ‖ ೭

ನಮಃ ಕೇಶವನಾಥಾಯ |
ನಯನಾನಂದಮೂರ್ತಯೇ ‖
ವೇಲಾಪುರೀನಿವಾಸಾಯ |
ಸತ್ಯಜ್ಞಾನಾಯ ವಿಷ್ಣವೇ ‖ ೮

(೫) ಬೇಲೂರು ಶಾಸನ 58, 71 (ಕ್ರಿ.ಶ. 1117)—*Epigraphia Carnatica*, Vol. V, Pt. II & Vol. XV. (೬) ಪ್ರಾಚೀನ ಶ್ಲೋಕ. (೭) ಬೇಲೂರು ಶಾಸನ 3 (ಕ್ರಿ. ಶ. 1397). (೮) ಪ್ರಾಚೀನ ಶ್ಲೋಕ.



ವಿಷ್ಣುವರ್ಧನರಾಯ



# ೧. ಪ್ರಸ್ತಾವನೆ

ಏನೀ ಮನೋನ್ಮಾದನ ಗಾನಸಂಭ್ರಮಂ |
ಏನೀ ಹೃದಾರ್ದ್ರೀಕರಣೋದ್ಯಮ ಕ್ರಮಂ ||
ವಾಣಿನ್ಯುದಾರಾಭಿನಯಾರ್ಥಮೇನಿದೇ-|
ನಾನಂದ ಸಂರಂಭಮದೇನು ಕಾರಣಂ || ೧

ಕಾಂತಾ ಸ್ವತಂತ್ರೋಚ್ಛ್ರಯ ರಾಸ ರಾವಮೇಂ |
ಸಂತುಷ್ಟ ಜೀವೋತ್ಸವ ನಾಟ್ಯರಂಗಮೇಂ ||
ಇಂತಪ್ಪ ಕೋಲಾಹಲಮಿನ್ನದೆಲ್ಲಿ ನೋ-|
ಡಂತಃಪುರಂ ಕೇಶವರಂಜನಾತುರಂ || ೨

ತಾನೆಲ್ಲ ವಿಶ್ವದ್ಯುತಿ ಶಕ್ತಿಯಾಗಿಯುಂ |
ತಾನೆಲ್ಲರಕ್ಷಿ ಶ್ರುತಿ ಸೌಖ್ಯಮಾಗಿಯುಂ ||
ಮಾನುಷ್ಯದಿಂ ನರ್ತನವಾಗಿಸುತ್ತೆ ತಾ-|
ನಾನಂದಿಪಂ ಕೇಶವನಾದಿಚೇತನಂ || ೩

ಪಾರಾವಾರದಿ ಮಾರುತಾಹತಿಯಿನಾದುಲ್ಲೋಲ ಕಲ್ಲೋಲಮಂ |
ತೀರಸ್ಥಂ ಕುತುಕಂಬಡುತ್ತೆ ನಿರುಕಿಪ್ಪಂತೀ ಸಭಾಸ್ಥಾನದೊಳ್ ||
ಸ್ಮೇರಾಸ್ಯಂ ಸಿರಿಕೇಶವಂ ನೆಲಸಿ ತಾಂ ನೋಳ್ಪಂ ಜಗದ್ಯೋಗದಿಂ |
ನಾರಸ್ವಾಂತದೊಳೇಳ್ವ ಭಾವರಸವೀಚೀಘೂರ್ಣನೋಲ್ಲಾಸಮಂ || ೪

ಜೀವಾಂತಃಕರಣಾಂಬುರಾಶಿಯ ಜಗತ್ಸಂಸರ್ಗಜಾತಾನಿಲಂ |
ಸಾವೇಗಂ ಗೆಯೆ ನೋಡು ತೀವಿ ಪರಿಗುಂ ಭಾವೋರ್ಮಿಮಾಲಾಕುಲಂ ||
ದೇವೋಪಾಸನ ದೀಕ್ಷೆಯೇನಿದು ಮನುಷ್ಯೋತ್ಕರ್ಷ ಸಂಧಾನಮೇಂ |
ಲಾವಣ್ಯಾರ್ಥವಿಕಾಸಮೇನಿದು ಧರಾಸ್ವರ್ಗೈಕ್ಯ ಸಂಸಿದ್ಧಿಯೇಂ || ೫

ಸೌಂದರ್ಯಂ ಪರವಸ್ತುಸಾಗರ ಚಿದಾನಂದೋರ್ಮಿಮಾಲಾ ಪೃಷ-|
ದ್ಬಿಂದೂತ್ಸೇಕಮಕಾಂಡ ಪುಣ್ಯ ಪವನಾವಾತಂ ನರಂಗುರ್ವಿಯೊಳ್ ||
ಅಂಧೀಕಾರಕಮಾಪೃಷನ್ಮಯಪಟಂ ಭೋಗಾಶಯಂಗಾದೊಡಂ |
ಸಂಧ್ಯಾತಾತ್ಮವಿಚಾರಿಗಾ ರಸಭರಂ ತಾಂ ಬ್ರಹ್ಮಸಂಜ್ಞಾಪಕಂ || ೬

ಲಾವಣ್ಯಂ ಸುಳಿದಂದು ಗೀತಹಸಿತಂಗಳ್ ತೀವಿದಂದು ಪ್ರಿಯಾ-|
ಹಾವೋದ್ಭಾವಗಳಾಡಿದಂದು ಸುಮಗಂಧಂ ಬೀಸಿದಂದಾ ಸುಖಂ ||
ಜೀವಾನಂದ ಸಮಸ್ತಮೂಲ ಚಿದನಂತಬ್ರಹ್ಮರಾಸಿಕ್ಯದೊಂ-|
ದಾವಿರ್ಭಾವಮೆನುತ್ತೆ ಸಂತಸಿಸುವಂ ತತ್ತ್ವಜ್ಞನಾತ್ಮೈಕ್ಯದಿಂ || ೭

ಬೇಲೂರ ಶಿಲಾಬಾಲಾಮಣಿಯರ್ |
ಶ್ರೀಲಾಕೃತಿ ಲಾವಣ್ಯೋಜ್ಜ್ವಲೆಯರ್ ||
ಲೋಲಾವಯವ್ರೋದಾರೇಂಗನೆಯರ್ |
ಕಾಲಾಪಗೆಯಾ ಕೂಲಂಬೊಲಿಹರ್ || ೮

ಕಲ್ಪನಪ್ರತಿಭಾಸಮುದ್ರದಿ ಜಕ್ಕಣೋಜನಿಬೋಧಿತರ್ |
ಶಿಲ್ಪಮಂದರದಿಂ ಮಥಂಗೆಯೆ ವಿಷ್ಣುವರ್ಧನ ಚೋದಿತರ್ ||
ಕಲ್ಪವಲ್ಲರಿ ಲಕ್ಷ್ಮಿವಾರುಣಿ ಸೋಮರಂದದಿ ಪುಟ್ಟಿದರ್ |
ಬಲ್ಪಿನೊಲ್ಪಿನ ಭಾವಭಂಗಿಯ ಬಾಲೆಯರ್ ಸುಖಲೋಲೆಯರ್ || ೯

ಕೇಶವೇಶನ ರಾಣಿಯರ್ ಶುಕವಾಣಿಯರ್ ಫಣಿವೇಣಿಯರ್ |
ಹಾಸಸಂಜ್ಞೆಯ ನೀರೆಯರ್ ಸುಶರೀರೆಯರ್ ಸ್ಮರವೀರೆಯರ್ ||
ಲಾಸಗಾಯನ ವಾದನಂಗಳ ಜಾಣೆಯರ್ ದೃಗುಬಾಣೆಯರ್ |
ರಾಸಲೀಲೆಯೊಳಾಡುವರ್ ಸಲೆ ಪಾಡುವರ್ ಕುಣಿದಾಡುವರ್ || ೧೦

ಅದಿತಿಯ ಸುತರಿಂಗಮೃತವನಚ್ಯುತ-|
ನೊದವಿಸಿ ನರರಿಗಮದನುಣಿಸಲ್ ||
ವಿಧಿಸಿದ ಮೋಹಿನಿಯಂಶಭವೆಯರೀ |
ಮದನಿಕೆಯರ್ ವಿಧುವದನಿಕೆಯರ್ || ೧೧

ಮಧುರಕಲಾಮಂಥಾನಂ ಮಾನುಷ |
ಹೃದಯರಸಾಬ್ಧಿಯಿನೊಗೆಯಿಸಿಹಾ ||
ಸುಧೆಯ ನಿರಂತರ ಶೀಕರ ಕಣವೀ |
ಮದನಿಕೆಯರ್ ಶುಭಸದನಿಕೆಯರ್ || ೧೨

ಹೃದಯದ ಭಾಷಿಕೆ ಸಂಪೂರ್ಣತೆಗೊಳೆ |
ಪದಗಾನಾಭಿನಯತ್ರಯಮುಂ ||
ಹದದಿಂದೊಂದಿರವೇಳ್ಕುಮೆನುವರೀ |
ಮದನಿಕೆಯರ್ ರಸಭಣನಿಕೆಯರ್ || ೧೩

ಎದೆಗುದಿ ಲೋಕದ ಮಧ್ಯದೊಳೊಂದೆಡೆ |
ಪದುಳದ ಶಾಂತಿಯ ಪಸರಿಸುವಾ ||
ವಿಧುಮಂಡಲಸಾರದ ಕಲಶಗಳೀ |
ಮದನಿಕೆಯರ್ ಸ್ಮರಗುಣನಿಕೆಯರ್ || ೧೪

ಚದುರೆಯರೊಲವಿನ ಮೋಹದ ಬಲಗಳು |
ಸದಮಲವಸ್ತುವಿಲಾಸಗಳು ||
ವಿಧಿತಂತ್ರಗಳೊಳಗುಟ್ಟನುಲಿವರೀ |
ಮದನಿಕೆಯರ್ ಹಿತಕಥನಿಕೆಯರ್ || ೧೫

ಕದಲದ ನೀರಿನ ಮೇಗಡೆ ಕಡಲೊಳು |
ಚೆದರಿಹ ತೆರೆಗಳ ಲೀಲೆವೊಲು ||
ಚಿದಬುಧಿಯಲೆ ತಾಮೆಂದುಸಿರುವರೀ |
ಮದನಿಕೆಯರ್ ಮಧುಕರಣಿಕೆಯರ್ || ೧೬

ಪರವಸ್ತು ವಜ್ರದೊಂದು |
ಸ್ಫುರಣಂ ಸೌಂದರ್ಯಮದರ ಕರಗಳ್ ನಾಂಗಳ್ ||
ಅರಿತದನು ಸುಖಿಸಿರೆನ್ನುತೆ |
ಧರೆಗೊರೆಯುವವೋಲು ಮೆರೆವರೀ ಮದನಿಕೆಯರ್ || ೧೭

ರೂಪಂ ಧ್ವನಿ ದನಿ ರಾಗಂ |
ಲಾಪಂ ರಾಗೋಕ್ತಿ ಯಾ ಸುದೃಕ್ ಸಲ್ಲಾಪಂ ||
ದೀಪಿಪುದು ಮನವ ತದ್ರಸ-|
ದಾಪಗೆಯಾತ್ಮೋಪವನವನಭಿವರ್ಧಿಸುಗುಂ || ೧೮

ಲಕ್ಷಣ ನಿರ್ದೇಶಗಳಿಂ |
ಸೂಕ್ಷ್ಮದ ತರ್ಕಾನುಮಾನ ಜಿಜ್ಞಾಸೆಗಳಿಂ ||
ಪ್ರೇಕ್ಷೆಗೆ ಸಿಲುಕದ ತತ್ತ್ವಂ |
ಸಾಕ್ಷಾತ್ತಲೆ ಹೃದಯದೊಂದು ಚಣದನುಭವದಿಂ || ೧೯

ಕ್ಷಣಿಕವನಕ್ಷಯ ಪದಕಂ |
ಕಣದನುಭವಮಂ ಪರಾತ್ಪರಾಮಿತ ನಿಧಿಗಂ ||
ಅಣು ಜೀವಿತಮಂ ವಿಶ್ವಕ-|
ಮನುಬಂಧಿಪ ಚಿತ್ರಸೂತ್ರಣಂ ಸೌಂದರ್ಯಂ || ೨೦

ಅಂಗಾಂಗ ತಾರಂಗಮೆ ರಂಗನರ್ತನಂ |
ಸಂಗೀತಕಂ ನಾದ ತರಂಗ ನರ್ತನಂ ||
ಭಂಗಾಯಿತಸ್ವಾಂತಮೆ ಕಾವ್ಯನರ್ತನಂ |
ಶೃಂಗಾವಟಭ್ರಾಮಮೆ ಜೀವನರ್ತನಂ ೨೧

ತರಂಗಿತಂ ಭೂತಲಮದ್ರಿಗರ್ತದಿಂ |
ತರಂಗಿತಂ ಸಾಗರಮೂರ್ಮಿಮಾಲೆಯಿಂ ||
ತರಂಗಿತಂ ಪುಷ್ಕರಮಿಂದುಸೂರ್ಯರಿಂ |
ತರಂಗನೃತ್ಯಂ ಜಗದೆಲ್ಲ ಚೇತನಂ || ೨೨

ಸರಾಂಗನಾಭಾವಸುಖಸ್ವರೂಪೆಯರ್ |
ವಿರಾಡ್ರಸಾವೇಶಿತ ಸತ್ತ್ವಶೀಲೆಯರ್ ||
ಸರಾಗ ಗೀತಾಂಗಿಕ ಚೇಷ್ಟಿತಂಗಳಿಂ |
ತರಂಗ ಸೌಂದರ್ಯವನಿಲ್ಲಿ ತೋರುವರ್ || ೨೩

ರಾಮಣೀಯಕ ಸತ್ತ್ವಸಾಗರವೀಚಿಯಂದದ ರಾಮೆಯರ್ |
ಭೂಮಿಯೂಷ್ಮಕೆ ತಂಪನೆರೆಯುವ ಮಂದಹಾಸನಿಕಾಮೆಯರ್ ||
ಪ್ರೇಮಸೇಕವ ಸೂಸುವರ್ ಹೃದಯಾಮಯಂಗಳ ನೀಗುವರ್ |
ಕಾಮಕಾರಕಪೂರಕ ಪ್ರಭುಧಾಮಶೃಂಗ ಲಲಾಮೆಯರ್ || ೨೪

ಮೂಕಭಾಷೆಯೊ ನಾಕಭಾಷೆಯೊ ಕಣ್ಗಳಿಂದೆದೆಯೊಕ್ಕು ತಾಂ |
ಸೌಕುಮಾರ್ಯದಿನತ್ತಣಿಂ ಪ್ರತಿಭಾಷಿತಂಗಳನೇಳಿಕುಂ ||
ಟೀಕನಕ್ರಮವಾ ಪ್ರಸಂಗಕೆ ಹಾರ್ದಿಕಾನುಭವಂಗಳಿಂ |
ಸ್ವೀಕರಿಕ್ಕದರರ್ಥಮಂ ಸಿರಿಕೇಶವಂ ರಸವೈಭವಂ || ೨೫



**ಸೂಚನೆ**—ಈ ಪ್ರಕರಣಕ್ಕೆ ಉಪಸಂಹಾರ ರೂಪವಾದ ಪದ್ಯಗಳು ೧೨೫ ನೆಯ ಪುಟ ದಲ್ಲಿಯವು ("ಸೌಂದರ್ಯ ವಿಜಯ").



ಕಪ್ಪೆ ಚೆನ್ನಿಗರಾಯಸ್ವಾಮಿ

# ೨. ಶ್ರೀ ಚೆನ್ನಕೇಶವ

ರಾಗ—ಶ್ರೀ (ಅಥವಾ ಆರಭಿ)] [ತಾಳ—ಆದಿ

ಶ್ರೀ-ಚೆನ್ನಕೇಶವಾ - ಶೃಂಗಾರ ಭಾವಾ ‖ ಪ.

ಸೌಮ್ಯನಾಯಕೀ ಸ್ನೇಹಮಹೋತ್ಸವ |
ಸೌಂದರ್ಯಾರ್ಣವ ಕರುಣಿಸು ದೇವಾ ‖ ಅ. ಪ.

ದೇವಾ - ದೇವಾಸುರನರ ಹೃದ್ಭಾವಾ |
ಭಾವಾತೀತ ಪ್ರಭಾವಾ - ಸುಖರಾವಾ ‖
ಜೀವಸಂಘ ಸಂಮೋಹನ ವೈಭವ |
ಲಾವಣ್ಯಾಮೃತ ಘನ ಸ್ವಭಾವಾ ‖ ೧

ಈಶಾ - ವಿಶ್ವಾದ್ಭುತ ಚಿತ್ರ ವಿಲಾಸಾ |
ಲಾಸೋಜ್ಜ್ವಲರೂಪ ವಿಕಾಸಾ - ಚಿದ್ಭಾಸಾ ‖
ಪೋಷಿಸಿ ಮಧುರಾವೇಶಂಗಳ ಸಂ-|
ತೋಷಿಪ ರಸಿಕಾಗ್ರೇಸರ ವೇಷಾ ‖ ೨

ಸ್ವಾಮೀ - ಬ್ರಹ್ಮಾಂಡಾವರ್ತನ ನೇಮೀ |
ಸಂಸಾರ ತಾಪ ಶಮ ಭೂಮೀ - ಸುಪ್ರೇಮೀ ‖
ರಾಮಣೀಯತಾ-ಸಾಮ್ರಾಜ್ಯಾಧಿಪ |
ಕಾಮರೂಪ ಸರ್ವಾಂತರ್ಯಾಮೀ ‖ ೩

# ೩. ತತ್ತ್ವಸೌಂದರ್ಯ

ರಾಗ—ಶಂಕರಾಭರಣ] [ತಾಳ—ಮಿಶ್ರಚಾಪು

ಭುವನ ಜೀವ ವಿಲಾಸಂ - ಕೇಶವ ವಾಸಂ |
ನವರಸ ಪರಿವೇಶಂ - ಈ ದೇಶಂ || ಪ.

ಭುವನ ವಿಸ್ತರ ನಿತ್ಯ ಸಂಸಾರ ಪಾದಪ |
ಧ್ರುವ ನಿಷ್ಯಂದನ ಮೂಲ ಕಂದ ವಿಕಾಸಂ || ಅ. ಪ.

ಸೌಮ್ಯನಾಯಕಿ ಮಾಯೆ - ಕಾಮ್ಯಭಾವದ ನೂರು-|
ರಮ್ಯಾಂಗನೆಯರಂತೆ - ಸುಳಿದಾಡಿ ಪಾಡೆ ||
ಸೌಮ್ಯಕೇಶವ ಪರ-ಬ್ರಹ್ಮನಾ ಕೇಳಿಯ |
ಸಂಮೋದದಿಂದೆ ಸಂ-ಭ್ರಮಿಪ ನಾಟಕವಿದು || ೧

ಕ್ಷೀರಾಬ್ಧಿಯಂತೆ ಶ್ರೀ-ಸುಧೆ ಶಶಿ ಕೌಸ್ತುಭ |
ಐರಾವತಾದಿಗ-ಳುದಿಸಿ ಬಂದವೊಲು ||
ಕಲ್ಪನಾಂಬುಧಿಯ ಮಂ-ಥನದಿಂದೆ ಬಂದರೀ |
ಶಿಲ್ಪಕನ್ನೆಯರು ಕಂದರ್ಪ ಬಿನ್ನಣಿಯರು || ೨

ತನು ಬೇರೆಯೆಂಬರು ಮನ ಬೇರೆಯೆಂಬರು |
ತನುಮನಗಳಿನಾತ್ಮ ಬೇರೆಯೆನ್ನುವರು ||
ತನುಮನಸಾತ್ಮಗ-ಳನ್ಯೋನ್ಯಯುಕ್ತಿಯ- |
ನನುಭವಿಸುವ ತಾಣ ಚೆನ್ನಿಗನಾಸ್ಥಾನ || ೩

ರಾಗವೆ ಲೇಸೋ ವಿ-ರಾಗ ತಾಪವೆ ಲೇಸೋ |
ರಾಗ ವಿರಾಗ ಸಂಯೋಗವೆ ಲೇಸೋ ||
ಭೋಗಭಂಗಿಯೊಳಾತ್ಮ-ತ್ಯಾಗವ ಗೈದಿಹ |
ರಾಗಿಣಿಯರ ಜೀವ-ಯಾಗ ಮಂಟಪವಿದು || ೪

ಸತ್ಯಚಿದಾನಂದ-ಸಾಗರವೀಚಿಯ |
ನೃತ್ಯವಿನೋದದ - ಪ್ರತ್ಯಕ್ಷಚಿತ್ರಂ ||
ತತ್ತ್ವಸೌಂದರ್ಯಪ್ರ-ಚಾರಿ ಜಕ್ಕಣಾಚಾರಿ |
ಭಕ್ತರೊಳ್ ಜ್ಞಾನೋಜ - ವಿಷ್ಣುವರ್ಧನರಾಜ || ೫

# ೪. ಧನ್ಯ ಮೂರ್ಧನ್ಯ

ರಾಗ—ಗೌಳಿಪಂತು] [ತಾಳ—ಮಿಶ್ರಚಾಪು

ಧನ್ಯ ಮೂರ್ಧನ್ಯ-ದೇವ ಶರಣ್ಯಾ ‖ ಪ.

ಚೆನ್ನಕೇಶವರಾಯ ರಸಿಕಾಗ್ರಗಣ್ಯಾ ‖ ಅ. ಪ.

ಕನ್ನೆಯರಿವರೋ - ಲಾವಣ್ಯಮೂರ್ತಿಯೆ ನಿನ್ನ |
ಬೇಡಿ ಕಾದಿಹರೋ |
ಸನ್ನಿಧಿಯಲಿ - ಸೊಬಗ ಸೂಸುವರೋ ‖
ಮನ್ನೆಯರೆಡರ ಸೈ-ಸದ ಪುಣ್ಯಪುರುಷನೆ |
ಸನ್ನೆಯನರಿತು ಪ್ರ-ಸನ್ನಿಸೊ ಪರಿಪೂರ್ಣ ‖ ೧

ಹೃದಯಗಹ್ವರದ ಮೂಲೆಗಳ ಮೌನದೊಳಿಲ್ಲೋ |
ನಿದ್ರಿಪ ಭಾವಗಳಾ |
ವದನೋಕ್ತಿಗೆಟುಕದ ಮೂಕಮಾನಸ ಮೇಘ- |
ವಲನ ವಿಲಾಸಗಳಾ ‖
ಗಾನಾಭಿನಯ ವಾದ್ಯಧ್ಯಾನದೆ ಚಿತ್ರಿಸಿ |
ಮ್ಲಾನ ಜೀವವನು ಸಂತ್ರಾಣಿಪರಿವರಯ್ಯ ‖ ೨





## ಮುಕುರ ಮುಗ್ಧೆ

ಮಂದಸ್ಮಿತ ಪ್ರಹಿತ ಚಾಂದ್ರಮ ವಕ್ತ್ರರಾಗಂ |
ಸೌಂದರ್ಯ ಕಲ್ಪತರು ವೇಲ್ಲಿತ ಬಂಧುರಾಂಗು ||
ಕಂದರ್ಪ ದರ್ಪ ಪರಿಜೃಂಭಕ ದರ್ಪಣಾಸ್ತ್ರಂ |
ಸಂದಿರ್ಪ ಮೋಹಿನಿಯದೇಂ ಸ್ವಕೃತಾತ್ಮಮೋಹಂ ||

# ೫. ಮುಕುರ ಮುಗ್ಧೆ

ರಾಗ—ಕೇದಾರ] [ತಾಳ—ಮಿಶ್ರಚಾಪು

ಮುಗುದೆಯಾದೆಯ ಕನ್ನೇ - ಮುಕುರದ ಚೆನ್ನೇ ‖ ಪ.

ನಿನ್ನ ಮೈ ಸೊಬಗಿಗೆ ನೀನೇ ಮನವ ಸೋತು ‖ ಅ. ಪ.

ಹರಹಿದ ಪೆರೆಯಂತೆ ಮೆರೆವ ಲಲಾಟದಿ |
ಧರಿಸೆ ಕುಂಕುಮವ ನೀಂ ಬೆರಲೆತ್ತಿದಂತೆ ‖
ಸ್ಥಿರದಿ ನಿಂದಿಹುದದು ಬೆರಗಿನ ಸೆರೆಯಲಿ |
ಪರವಶೆಯಾದೆ ನೀಂ ಪರವಶಗೆಯ್ವಳೆ ‖ ೧

ಬೆರಗಿದು ಸಾಜವೆ ಬರಿಯ ಬಿಬ್ಬೋಕವೆ |
ತರಳಲೋಚನೆಯಿದು ಸ್ಮರತಂತ್ರನಯವೆ ‖
ಮೆರೆದು ಮೈಮರೆತಂತೆ ಪರಿಕಿಸುತಿನಿಯನ |
ಗರುವವ ಮುರಿವೆಯ ಗರುವವ ನಟಿಸುತೆ ‖ ೨

ಕನ್ನಡಿಯಲಿ ಕಾಣ್ಬುದೇಂ - ಮನ್ನಿಯೆ ತೊಟ್ಟ |
ಚಿನ್ನರನ್ನಗಳಂದವೇಂ |
ಉನ್ನತದಾನನವೇಂ - ತನ್ವಿಯೆ ತನು- |
ವಿನ್ಯಾಸತ್ರೈಭಂಗಿಯೇಂ ‖
ಅನ್ಯಾಯವಾದೀತು ನೀನಿಂತು ನಿಂತಿರೆ |
ಧನ್ಯೆಯಪ್ಪೊಡೆ ನೋಡು ಚೆನ್ನಕೇಶವನೆಲ್ಲಿ ‖ ೩



ಶುಕ ಭಾಷಿಣಿ

ಶುಕಸಂಭಾಪಿಣಿ ಹಾಸಿನಿ|
ಮುಕುಲಿತ ನಯನಾಭಿರಾಮೆ ಸಂಕೇತಕಮಂ ||
ಸಕರುಣಮನೇನೊ ದೂತಿಗೆ |
ಪ್ರಕಟಂಬಡಿಸುತ್ತಲಿರ್ಪ ಳಿನಿಯಂಗುಸಿರಲ್ ||

## ೬. ಶುಕ ಭಾಷಿಣಿ

ರಾಗ—ಬೇಹಾಗ್] [ತಾಳ—ಏಕ

ಏನೇ ಶುಕಭಾಷಿಣೀ ಸುದ್ದಿ-|
ಯೇನೇ ಮನೋಲ್ಲಾಸಿನೀ ॥ ಪ.

ಆರಾರ ತೆಗಳುತಲಾರಾರ ಪೊಗಳುತ |
ಕೀರಾಲಿಗುಸಿರುವೆ ಮಾರಾಂತರಂಗವ ॥ ಅ. ಪ.

ಚಿಂತಾವಿಚಾರಂಗಳೇಂ - ನಿನ್ನ |
ಸಂತೋಷ ಗೋಪ್ಯಂಗಳೇಂ ॥
ಕಾಂತಂಗದೇನೇಕಾಂತಂಗಳೊಸಗೆಯ |
ಕಾಂತೇ ನೀ ಕಳುಹಿ ಅ-ಶಾಂತನನಾಗಿಪೆ ॥ ೧

ವನ್ಯಪ್ರವಾಸಿಯೊಳೇಂ - ನಿನ್ನ |
ಬಿನ್ನಾಣ ಬೂತಾಟಗಳ್ ॥
ಇನ್ನಾರುಮಿಲ್ಲವೆ ಚೆನ್ನಕೇಶವನಿಗೆ |
ನಿನ್ನಂದ ಚಂದವ ಬಣ್ಣಿಪ್ಪ ಚತುರರು ॥ ೨





## ವಾಸಂತೀ

ರಾಕೇಂದುಮುಖಿಯ ವಿರಹ-|
ವ್ಯಾಕುಲತೆಯ ಮರಸಿ ಕಳೆವ ನೆವದಿಂದವಳಂ ||
ಓಕುಳಿಯನಾಡೆನುತ್ತು-|
ದ್ರೇಕಿಸುತಿಹರವಳ ವೆತೆಯನೀ ಸ್ಮರಸಖಿಯರ್ ||

## ೭. ವಾಸಂತೀ

ರಾಗ—ವಸಂತ] [ತಾಳ—ಆದಿ

ವಾಸಂತಕೇಳೀರತೇ - ಲಲಿತೇ |
ರಾಸಿಕ್ಯ ದೀಕ್ಷಾವ್ರತೇ - ಓ ವನಿತೇ ‖ ಪ.

ಮಾಣಿಕ್ಯರಾಜತ ಸೌವರ್ಣರಂಜಿತ |
ವೇಣುಪ್ರಣಾಳಿಯ ಶೋಣಾಂಬುಧಾರೆಯ ‖ ಅ. ಪ.

ಶ್ರೀಗಂಧಕಸ್ತೂರಿಕಾ - ಕೇಸರ |
ಪುನ್ನಾಗ ಸೌಗಂಧಿಕಾ ‖
ರಾಗಾಂಬು ಕುಂಕುಮ - ಸೇಕೋಪಯಂತ್ರದೆ |
ಯಾಗಾವಭೃಥವೇಂ ಚೆನ್ನಾಕೇಶವನಿಗೆ ‖ ೧





ಕೀರವಾಣಿ

ಕೀರೋಕ್ತಿಯೊಳಾವುದನೋ |
ಸ್ವಾರಸ್ಯವ ಕಾಣುತಲೀ ||
ಚಾರುಪ್ರಭೆ ವಲ್ಲಭನಂ |
ಸಾರಿರ್ಪಳ್ ಮಾನಸದೊಳ್ ||

# ೮. ಕೀರವಾಣಿ

**ರಾಗ—ಕೀರವಾಣಿ]** **[ತಾಳ—ರೂಪಕ**

ದೂರನದೇಂ ತಂದಿಹಳೀ |
ಕೀರವಾಣಿ ತಾಂ ನಿನಗೆ ‖ ಪ.

ಮಾರನದೇಂ ರಾಯಸವೇ |
ಶಾರಿಕೆಯಾ ಕಥೆಯದೇನೆ ‖ ಅ. ಪ.

ವರನು ಬರುವನೆಂದು ನೆನೆದು |
ಪರಿಮಳಗಳ ತನುವಿಗೆರೆದು |
ಕರದಿ ವೀಳೆಯವನು ಪಿಡಿದು |
ನಿಂದಿಹೆಯೇನವನೊಳೊಲಿದು ‖

ಬರುವನೊ ತಾಂ ಬರಲೊಲ್ಲನೊ |
ಕರೆಯೊಸಗೆಗೆ ಕಾದಿರುವನೊ |
ತ್ವರಿತದಿ ಶುಕಿ ಕರೆಯಳೇಕೆ |
ದೊರೆಯು ಚೆನ್ನಿಗೇಶನ ಸಖಿ ‖ ೧





ಕಪಿ ಕುಪಿತೆ

ಕಾಪಿಕ ವ್ಯಾಜದಿಂದಂತ-।
ಸ್ತಾಪಮಂ ತೋರುತಿರ್ಪಳೀಂ ॥
ಕೋಪಗೊಂಡೀಕೆಗೇನಾಯ್ತಾ।
ರೂಪಮಿನ್ನುಂ ವಿರಾಜಿಕುಂ ॥

# ೯. ಕಪಿ ಕುಪಿತೆ

ರಾಗ—ಕಾಪಿ] [ತಾಳ—ಆದಿ

ಓ ಮುಗ್ಧ ಕೋಪನೇ - ಪ್ರೇಮಸ್ಮಿತಾನನೇ |
ಕೈಮಾಳ್ಪುದೇಕೆ ನೀ-ನೀ ಮಂಗಮಾಣಿಯೊಳ್ || ಪ.

ಮಾನಾಂಬರಾಂತವ - ವಾನರನೆಳೆದೊಡೇಂ |
ಹಾನಿಯದೇನಾಯಿತೆ - ಮಾನಾಭಿಮಾನಿನಿ ||
ಏಣಾಕ್ಷಿ ನಿನ್ನಯ - ಪೀನಾಂಗವಿಭ್ರಮ-|
ಧೂನನಕೀ ಕಪಿ - ಕಾರಣನಾದನೇ || ೧

ಸುಂದರ ಗಾತ್ರದಾ - ಸಿಂಧೂರ್ಮಿಮಾಲೆಯಾ |
ಬಂಧುರ ಲೀಲೆಯಾ-ಸಂದವನಾಗಿಪಾ ||
ಕಂದರ್ಪ ದೌತ್ಯದ - ಸಂಧಾನ ತಂತ್ರವ |
ಮನ್ನಿಸನೇನೆ ಆ - ಚೆನ್ನಕೇಶವ ಜಾಣೆ || ೨





ಲೀಲಾ ಕಿರಾತಿ

ಶಾರಿಯುಗ್ಮಂ |
ಮಾರತಿಗ್ಮಂ ||
ವೀರೆಯಸ್ತ್ರಂ |
ಚಾರುಗಾತ್ರಂ ||

# ೧೦. ಲೀಲಾ ಕಿರಾತಿ

**ರಾಗ—ಕೇದಾರಗೌಳ]** **[ತಾಳ—ಮಿಶ್ರಚಾಪು**

ಕೋಪವಿದೇನೆಲೆ - ಕೋಮಲ ತನುಲೀಲೆ |
ಚಾಪಹಸ್ತವಿದೇನೆಲೇ - ಓ ಬಾಲೆ || ಪ.

ಆ ಪಕ್ಷಿಯುಗಳದ - ಚಾಪಲ್ಯ ವೀಕ್ಷೆಯಿಂ |
ತಾಪವಾಯಿತೆ ನಿನ್ನ - ಮನಕೆ ಸುಶೀಲೇ || ಅ. ಪ.

ಧನುವ ನೀ ತೊಟ್ಟೊಡೆ - ತನುರಾಗವಿಳಿವುದೆ |
ಮನಸಿಜಾಶ್ರಯಗರ್ವಿತೇ - ಓ ದಯಿತೇ ||
ಇನಿಯರಾಟವ ಕಂಡು - ಕಿನಿಸುಗೊಳ್ಳುವರೇನೆ |
ಕನಿಕರಿಸದೆ ನೀಂ - ಕರುಬುವುದೇನೆ || ೧

ಶಾರೀರವೋಹವ - ಬೀರುವೀ ವೀರಕೆ |
ಶಾರಿಕಾಯುಗ ಬರಿ - ಕಾರಣವಾಯ್ತೇ ||
ಕೈರಾತವೇಷಿ ನೀಂ ಪೋರಾಡುವೊಡೆ ಸಾರು |
ಧೀರನಿರ್ಪನು ನಮ್ಮ ಚೆನ್ನಕೇಶವ ದೊರೆ || ೨





## ಮಂಜುಕಬರೀ

ಕಬರೀಭರಮಂ | ಶುಭಪುಷ್ಪಗಳಿಂ ||
ಸೊಬಗಾಗಿಸುವಳ್ | ವಿಭವಾಢ್ಯೆಯಿವಳ್ ||

---

ಕೇಶವೇಶಲಸದ್ರೂಪಂ ಕೇಶವೇಶ ಪ್ರಿಯಾಶಯಂ |
ಕೇಶವೇಶಲಸದ್ರೂಪಂ ಕೇಶವೇಶ ಪ್ರಿಯಾಶಯಂ ||

# ೧೧. ಮಂಜುಕಬರಿ

ರಾಗ—ನಾಟಕುರಂಜಿ] [ತಾಳ—ಮಿಶ್ರಚಾಪು

ಸೊಗಸಾಯಿತೆ ಕಬರೀ - ಸ್ಮಿತಾಧರಿ ‖ ಪ.

ಸೊಗಸಾಯಿತೆ ರಾಜ-ಮುಕುಟದವೊಲು ಬಲು-|
ಬಗೆಯ ಕಾಂತಿಯ ಸುಮಸುರಭಿಗಳೊಪ್ಪಿರೆ ‖ ಅ. ಪ.

ಕಾಶ್ಮೀರರಾಗರು ತೈಲ-ವಾಸನೆಗಳ ಕಟ್ಟಿ |
ಕೇಶರಾಶಿಯ ನಾಗ-ಪಾಶವ ಸುತ್ತಿ ‖
ದೋಷವಿಲ್ಲದ ಚೆನ್ನ-ಕೇಶವ ಹೃದಯವ |
ಕೈಸರೆ ಪಿಡಿವೆಯ - ಮೋಸದ ಹೆರಳಿಂದೆ ‖ ೧

ಕಾಳಿರುಳಿನ ಕಪ್ಪು-ಕುರುಳು ಗುಂಗುರಿನೊಪ್ಪು |
ನೀಳಾಗಿ ಹೆಣೆಲಿಟ್ಟು - ಸುತ್ತಿದ ಕೊಪ್ಪು ‖
ನೋಳ್ಪರ ಕಣ್ಮನ-ಕಹುದು ಮೋಹದ ಹೆಪ್ಪು |
ಮೌಳಿಯಿಂ ಕೇಶವ-ನಡಿಗಳ ನೀನಪ್ಪು ‖ ೨





## ಮುರಜಾಮೋದೆ

ಝಣಜ್ಝಣತ್ಕ ಕಿಂಕಿಣೀ |
ಢಣಡ್ಢಣತ್ಕ ಢಕ್ಕಿಣೀ ||
ಸ್ವನೋತ್ತರಂಗಿತಾಂಗಿನೀ |
ಮೃಣಾಲ ಲೋಲ ನರ್ತಿನೀ ||

# ೧೨. ಮುರಜಾಮೋದೆ

ರಾಗ—ಅಠಾಣ] [ತಾಳ— ಮಿಶ್ರಚಾಪು

ಏನೀ ಮಹಾನಂದವೇ - ಓ ಭಾಮಿನೀ |
ಏನೀ ಸಂಭ್ರಮದಂದವೇ - ಬಲ್ಬಂದವೇ ‖ ಪ.

ಏನೀ ನೃತ್ತಾತ್ಮಮೋದ - ಏನೀ ಮೌರಜನಾದ |
ಏನೀ ಜೀವೋನ್ಮಾದ-ವೇನೀ ವಿನೋದ ‖ ಅ. ಪ.

ಡಕ್ಕೆಯ ಶಿರಕೆತ್ತಿ - ತಾಳಗೋಲಿಂ ತಟ್ಟಿ |
ತಕ್ಕಿಟ ಧಿಮಿಕಿಟ - ತಕಝುಣುರೆನಿಸಿ ‖
ಕುಕ್ಕುತೆ ಚರಣವ - ಕುಲುಕುತೆ ಕಾಯವ |
ಸೊಕ್ಕಿದ ಕುಣಿತವ - ಕುಣಿವೆ ನೀನೆಲೆ ಬಾಲೆ ‖ ೧

ಆರೋ ನಿನ್ನಯ ಹೃದಾ-ಗಾರದಿ ನರ್ತಿಸಿ |
ಮಾರ ಶೂರತೆಯ ಪ್ರ-ಚಾರಿಸುತಿರ್ಪನ್ ‖
ಸ್ಮೇರವದನ ನಮ್ಮ - ಚೆನ್ನಕೇಶವರಾಯ- |
ನೋರೆಗಣ್ಣಿಂ ನನ್ನೆ - ತೋರುತಲಿಹನೇನೆ ‖ ೨





ಕಪಟಭೈರವಿ

ಭೈರವ ಶೂಲ ಕಪಾಲಗಳಿಂದೇಂ |
ದಾರುಣದೀಕ್ಷೆಯ ವೇಷಗಳಿಂದೇಂ ||
ನೀರೆಯು ಬೆಡಗನು ಮುಚ್ಚಿಡಲಹುದೇಂ |
ಧೀರರನೀ ಪರಿ ಬೆಚ್ಚಿಸಲಹುದೇಂ ||

# ೧೩. ಕಪಟಭೈರವಿ

**ರಾಗ—ಭೈರವಿ]** **[ತಾಳ—ಮಿಶ್ರಚಾಪು**

ಭೈರವ ವೇಷದಿಂ-ದಾರ ನೀನಂಜಿಪೆ |
ಮಾರತಂತ್ರ ಕಲಾಪೇ - ಸುರೂಪೇ ‖ ಪ.

ಶೂಲರುಂಡವದೇಂ ಕ-ಪಾಲಪಾತ್ರೆಯದೇನೆ |
ಕಾಲೆಡೆ ಮೊಳಗುವ - ತಾಳ ಮದ್ದಲೆಯೇನೆ ‖ ಅ. ಪ.

ಆರರಿಯರೆ ನಿನ್ನ - ವೈರಾಗ್ಯ ಕಪಟವ |
ಮಾರಭಿಕ್ಷೆಯನಿಂತು - ಕೋರುವುದೇನೆ ‖
ತಾರಳ್ಯ ನಯನದ - ಸ್ಮೇರಕಪೋಲದ |
ತಾರುಣ್ಯವನದೆಂತು - ಮರೆಮಾಚಲಪ್ಪುದೆ ‖ ೧

ಹೆದರಿಪುದಾರನೆ - ಮದಿರಲೋಚನೆ ಪೇಳು |
ಮಧುರ ರೂಪವ ಮತ್ತೆ - ತಳೆವುದೆ ಮೇಲು ‖
ಚದುರ ಮಾಯಾವಿಯೀ - ಚೆನ್ನಕೇಶವ ನಮ್ಮ |
ಹೃದಯಂಗಳೊಳವೊಕ್ಕು - ಗೆಲುವನೆಲ್ಲರನಮ್ಮ ‖ ೨





ತಾಂಡವೇಶ್ವರಿ

ಇವಳಾರ್ ತಾಂಡವ ರಭಸಕೆ |
ಡವಣೆಯು ಹವಣಾಗಿಸುತ್ತೆ ತನ್ನೀ ಸೊಬಗಂ ||
ಅವಲೋಕಿಪರಾರೆನ್ನುತೆ |
ಭುವನವ ಕೇಳುವವೊಳಿರ್ಪಳಿವಳೇಂ ಕಲಿಯೋ ||

# ೧೪. ತಾಂಡವೇಶ್ವರಿ

ರಾಗ--ಮಧ್ಯಮಾವತಿ] [ತಾಳ—ಏಕ

ಡಂಗುರ ಪೊಯ್ವುದದೇನೆ ಜನ-|
ಜಂಗುಳಿಗೆಲ್ಲ ನೀಂ ಸಾರ್ವುದದೇನೆ ‖ ಪ.

ಅಂಗಜವಾರ್ತೆಯದೇನೆ - ಎಲೆ |
ಶೃಂಗಾರ ಶೀಲೆ ನಿನ್ನಯ ಸುದ್ದಿಯೇನೆ ‖ ಅ. ಪ.

ಹವಣೆಯ ತಟ್ಟುತ್ತಲಿರುವೆ - ಗೆಜ್ಜೆ -|
ಹವಣಿಂದೆ ಮೆಯ್ಯ ನೀಂ ಕುಲುಕಿಸಿ ಮೆರೆವೆ ‖
ಸವಿನಗುವನು ನಗುತಿರುವೆ - ಓ |
ಯುವತೀ ನಿನ್ನಿಂಚರದೊಳಗೇನಿಟ್ಟಿರುವೆ ‖ ೧

ತದ್ಧಿಮಿ ತಕಧಿಮಿ ಝಣುತಾ ಥೈಯ |
ತತ್ತೋಂ ತದ್ಧಿಮ್ಮಿತ ತಕಝುಣು ರಣಿತಾ ‖
ಮದ್ದಲೆ ತಾಳದ ಕುಣಿತಾ - ಅದು |
ನಿದ್ರಿಪ ಚೆನ್ನಕೇಶವಗೆ ಜಾಗರಿತಾ ‖ ೨





## ಮುರಳೀಧರೆ

ಗೋಪಿಯರೊಲಿದರ್ಚಿಸಿದಾ |
ರೂಪವ ತಾಂ ವರಿಸಿ ಧರಿಸಿ ವೇಣುಸ್ವರಿತಾ-|
ಲಾಪನದಿಂದರಸುವಳೇಂ |
ಚಾಪಲೆ ಸಾರೂಪ್ಯಸೌಖ್ಯಮಂ ಯದುಪತಿಯೊಳ್ ||

# ೧೫. ಮುರಳೀಧರೆ

**ರಾಗ—ಯದುಕುಲಕಾಂಭೋಜ]** **[ತಾಳ—ಮಿಶ್ರಚಾಪು**

ಯದುವಂಶತಿಲಕನ - ವೇಷವಿದೇನೇ |
ಮದಿರಾಕ್ಷಿ ಮುರಲೀ-ನಾದವಿದೇನೇ ‖ ಪ.

ಮುರಲೀಗಾನವಿದೇನೆ - ತರಲಾಪಾಂಗವದೇನೆ |
ಸ್ಮರಸಂಭ್ರಮಾನಂದ-ಸ್ಮರಣೆಯಿದೇನೇ ‖ ಅ. ಪ.

ಕೊಳಲನೂದುತೆ ನಮ್ಮ - ಮನದಿ ಪವ್ವಳಿಸಿದ್ದ |
ನಲವೊಲವೆಲ್ಲವ - ಕೆರಳಿಸಿ ಕುಣಿಸಿ ‖
ಪುಲಕಾಂಕುರಗಳನಾ-ಗಿಸಿ ಮೆಯ್ಯ ಮರೆಯಿಸಿ |
ನಲಿವೀ ಗಾಯನಮಾಯೆ-ಯೊಳಗುಟ್ಟದೇನೆ ‖ ೧

ಆಶೆಗಳೆಷ್ಟೋ ನಿರಾಶೆಗಳಿನ್ನೆಷ್ಟೋ |
ರೋಷ ದುಃಖ ಪ್ರೇಮೋ-ತ್ಸಾಹಂಗಳೆಷ್ಟೋ ‖
ಸಾಸಿರ ಸುಳಿಗಾಳಿ ಬೀಸಿ ನಮ್ಮೆದೆಯನು |
ಘಾಸಿಗೊಳಿಸೆ ಚೆನ್ನಕೇಶವನೊಲಿವನೆ ‖ ೨





## ಗಾನಜೀವನೆ

ಮಾನುಷ್ಯ ಹೃನ್ಮಧ್ಯದಿ ಬಂದಿಯಾಗಿಪಾ |
ನಾನಾನುರಾಗಾನುಭವಂಗಳೋಳಿಯಂ ||
ಗಾನಪ್ರವಾಹಂಗಳಿನೊಯ್ದು ಮುಕ್ತಿಯಂ |
ಕಾಣಿಪ್ಪಳೀ ರಾಗಿಣಿ ರಾಗಯೋಗದಿಂ ||

# ೧೬. ಗಾನಜೀವನೆ

ರಾಗ—ರೀತಿಗೌಳ] [ತಾಳ—ಮಿಶ್ರಚಾಪು

ಆವ ರಾಗವ ಪಾಡುವೇ - ಓ ಚೆಲುವೇ |
ಎನ್ನೊಲವೇ ಬಾಳ್ಗೆಲವೇ - ನೀನಾವ ರಾಗವ ಪಾಡುವೇ || ಪ.

ಆವ ರಾಗವ ಪಾಡಿ - ಆವ ಮಾಟವ ಮಾಡಿ |
ಆವ ಜೀವವ ಕಾಡಿ - ನೀನಿಂತು ನಲಿಯುವೆ || ಅ. ಪ.

ಕಲಹಂಸಿ ಲಲಿತಸ್ವರೇ - ಮನೋಹರೆ |
ವಿಲಸಿತ ವಿವರಾಧರೇ - ಓ ಚದುರೇ ||
ಮನಸಿನ ಗುಹೆಯಲಿ - ಮಲಗಿರ್ಪ ದನಿಗಳ |
ಹೊನಲಾಗಿ ಹರಿಸಿ ಜಾ-ಲಿಸುವೆ ನಮ್ಮ ಸುಗಳ ||

ಮಧುರಗೀತಾಯುಧದೆ ನಮ್ಮಯ |
ಚದುರ ಚೆನ್ನಿಗ ಕೇಶವೇಶನ ||
ಹೃದಯರಾಜ್ಯವ ಸೂರೆಗೊಳ್ಳುವ |
ಮದನ ಬಲ ಪಟ್ಟಾಧಿಕಾರಿಣಿ || ೧





## ಜಗನ್ಮೋಹಿನಿ

ದೈತೇಯರ ಮೋಹಿನಿ ಕಣ್ಪಿಡಿದಾ ।
ಮಾತೇನವರಲ್ಪಕೆ ಮೈಮರೆವರ್ ॥
ಭೂತೇಶನ ನಿಃಸ್ಪೃಹೆಯಂ ಮುರಿದಾ ।
ಚೈತನ್ಯ ವಿಲಾಸಿನಿಯಾಟವಿದೈ ॥

# ೧೮. ವೀಣಾಪಾಣಿ

ರಾಗ—ಕಲ್ಯಾಣಿ] [ತಾಳ—ಆದಿ

ವೀಣಾಪಾಣೀ - ವಿಶ್ವಕಲ್ಯಾಣೀ |
ಗಾಯನ ನರ್ತನಾ-ನಂದಪ್ರದಾನೀ ‖ ಪ.

ಮೌನದಾ ಗಾಯನ - ಕಾಣದಾ ನರ್ತನ |
ಧ್ಯಾನದ ಕಿವಿಕಣ್-ಗಮೃತಾಸ್ವಾದನ ‖ ಅ. ಪ.

ಯುಗ ಯುಗದಿಂದಲೀ - ಜಗಕೆ ನಿನ್ನೊಲವಿನ |
ಸೊಗವ ನೀಂ ಸೂಸುತೆ - ನಗುತೆ ನಿಂದಿಹೆಯೇ ‖
ಮುಗುದನಾಗಿ ನೋಳ್ಪನೀ - ಸೊಗಸಿನ ಕೇಶವಂ |
ಮುಗಿಯುದೀ ಸರಸವ - ಬಗೆವರದಾರೇ ‖ ೧





ಕುಟಿಲ ಕುಂತಲೆ

ಇನಿಯನ ನೆನೆದಾರಿವಳ್ |
ಮಣಿಮುಕುರದಿ ನೋಡುವಳ್ ||
ಪಣೆಯಲಕವ ತಿದ್ದುವಳ್ |
ಮನವನೆ ಸೆರೆಗೊಳ್ಳುವಳ್ ||

# ೧೯. ಕುಟಿಲ ಕುಂತಲೆ

ರಾಗ—ಕಾಂಭೋಜಿ] | ತಾಳ—ರೂಪಕ

ಕುಟಿಲ ಕುಂತಲೆ - ಕುಮುದ ಕೋಮಲೆ |
ಚಟುಲ ಲೋಚನೇ - ಬಾಲೆ || ಪ.

ನಿಟಿಲದಲಕವೇನು ಸೊಗಸೆ |
ತಟಿದುದಾರೆ ಚಾರುಶೀಲೆ || ಅ. ಪ.

ಅಂಗನೆ ನಿನ್ನಯ - ಮುಂಗುರುಳೋಳಿಯ |
ಗುಂಗುರ ನಾರಿಗೆ - ಸಂಕಲೆಯಾಗಿಪೆ ||
ಕೊಂಗಿದ ತೋಳದೇ-ನಂಗಜ ಚಾಪವೆ |
ಇಂಗಿತವರಿತ ಭು-ಜಂಗನೆ ಕೇಶವ ||





ರಸಿಕ ಶಬರಿ

ಮಾಕಂದ ಸಂಧಾನಿತ ಪಾಣಿ ಪಲ್ಲವಂ |
ಸಾಕೂತ ಭಾವಾನ್ವಿತ ದೇಹವಲ್ಗನಂ ||
ಲೋಕಪ್ರಜೋದ್ದೀಪಕಚಾರು ಯುಕ್ತಿಯೋ |
ಸಾಕೇತರಾಜಾರ್ಪಿತ ದೈವಭಕ್ತಿಯೋ ||

## ೨೦. ರಸಿಕ ಶಬರಿ

ರಾಗ—ನಾಯಕಿ ಅಥವಾ ದರ್ಬಾರು ಅಥವಾ ಶುದ್ಧಸಾವೇರಿ] [ತಾಳ—ರೂಪಕ

ಅಭಿನವಾವತಾರಿಯಾದ |
ಶಬರಿಯೇನೆ ನೀನು ಭಾಮೆ ||
ಸೊಬಗನಿಲ್ಲಿ ಕಂಡು ನಿನ್ನ |
ವಿಭುವನರಸ ಬಂದೆಯೇನೆ || ಪ.

ಯಮಿತೆಯು ರಘುವರನು ತೊರೆದು |
ರಮಣರೂಪಿಯಾದನೆಂದು ||
ಶ್ರಮಣಿತೆಯನು ನೀನು ತೊರೆದು |
ಪ್ರಮದೆಯಾಗಿ ನಿಂದೆಯೇನೆ || ಅ. ಪ.

ಕುಸುಮ ಪಲ್ಲವಗಳ ಭರದೆ |
ಕುಸಿವ ಲತೆಯ ಕೆಲದಿ ನಿಂತು ||
ಮಿಸುನಿ ಮೆಯ್ಯಿನಂತು ಬಳುಕಿ |
ನಸು ನಗುವಿಂ ಮೆರೆದು ||
ರಸ ರಸಾಲಫಲವ ವರನಿ-|
ಗೊಸಗೆಯೀವಳಂತೆ ತೋರ್ಪೆ ||
ಯಶಸಿ ಕೇಶವನನೆ ರಾಮು-|
ರಸಿಕನೆಂದು ಬಗೆದೆಯೇನೆ || ೧





ವೀರಯೋಷಿತೆ

ನಾರೀತನುವೋ |
ವೀರಾಂಗಣವೋ ||
ಸ್ಮೇರಾಸನವೋ |
ಮಾರೇಂಗನವೋ ||

# ೨೧. ವೀರಯೋಷಿತೆ

ರಾಗ—ಮಾಯಾಮಾಳವಗೌಳ] [ತಾಳ—ಮಿಶ್ರಚಾಪು

ಏನಿದು ರೋಷಾ - ವೀರಾವೇಶಾ ॥ ಪ.

ಮಾನಿನಿ ನಿನ್ನಂಗ-ಭಾವಪ್ರಕಾಶಾ ॥ ಅ. ಪ.

ಕ್ಲೇಶವೇನಾಯಿತೆ - ಯೋಷಾಮಣಿಯೆ ನಿನಗೆ ।
ಹಾಸ್ಯವಾಡಿದನಾರೆ - ದೋಷವದೇನೆ ॥
ಆಶೆಯ ತೋರಿ ನಿ-ರಾಶೆಯ ಗೆಯ್ದ ಆ ।
ಕೇಶವನೊಳ್ ಮುನಿ-ದಾಕಾಶವಿರಿವೆಯ ॥





ಪುಂ ವಿಡಂಬಿನಿ

ಗಡ್ಡಮೀಸೆಗಳೇನೆ ಗಂಡನಣಕಿಪೆಯೇನೆ |
ಮದ್ದಳಿಗನನು ಪೋಲ್ವ ಬಾಗುನಿಲುವೇನೆ ||
ನಿರ್ದಯಂ ಚೆನ್ನನೆಂಬುದ್ವೇಗವನು ತೀರಿ-|
ಪುದ್ಯಮವಿದೇನೆ ಅದು ಬರಿವೆರ್ತ ಕಾಣೆ ||

# ೨೨. ಪುಂವಿಡಂಬಿನಿ

ರಾಗ—ಶಂಕರಾಭರಣ] [ತಾಳ—ತ್ರಿಶ್ರಏಕ

ಆರ ನಗಿಸುವೇ - ಮತ್ತಾರನಳಿಸುವೆ |
ಆರ ಕತದಿ ಪುಂವಿಡಂಬ-ಕಾರಿಯಾಗಿಹೆ ‖ ಪ.

ತಾಳ ತಪ್ಪಿದಾ - ಮೇಳಕಾಗದಾ |
ಕೀಳು ಮರ್ದಳಾ-ಸ್ಫಾಲಕಾರಿಯಂ ‖
ಹೇಳನಂ ಗೆಯಲ್ - ತಾಳಿದೀ ಮುಖಂ |
ಓಲಗಕ್ಕೆ ಸಂ-ಶ್ಲೀಲಮಕ್ಕುಮೇ ‖ ೧

ಮೀಸೆಯಂಟಿಸಲ್ - ಸೀಸಕಂ ತೊಡಲ್ |
ಯೋಷೆ ಸಾಜಮೇಂ - ಲೇಶಮಕ್ಕುಮೇ ‖
ಮೋಸ ಪೋಗನೇ - ಕೇಶವೇಶ್ವರಂ |
ವೇಷವರಿತು ಸಂ-ತೋಷಗೊಳುವನೇ ‖ ೨





ನಾಟ್ಯ ನಿಪುಣೆ

ಹರದಗ್ಧ ಸ್ಮರ ಭಸ್ಮವ |
ಹರಡೆ ಮರುತ್ತದರೊಳೊಂದು ಕಣವೀಶನೊಳಂ ‖
ಗಿರಿಜೆಯೊಳೊಂದುಂ ಸೇರ್ವವೊ |
ಲೆರಚಾಡಲ್ ಪ್ರಕೃತಿ ನರ್ತಿಸಿದ ನಾಟ್ಯವಿದೇಂ ‖

# ೨೩. ನಾಟ್ಯ ನಿಪುಣೆ

ರಾಗ—ನಾಟ] [ತಾಳ—ಆದಿ

ನೃತ್ಯನೈಪುಣೇ - ನಿತ್ಯರಾಗಿಣೀ |
ಚಿತ್ತಜಾಗಮಾರ್ಥ-ವ್ಯಕ್ತಹಾಸಿನೀ || ಪ.

ಮುರಲೀಸಿನಾದ - ಮುರಜಾನುವಾದ |
ಸ್ವರಮೇಳನದಾ - ಸರಸಪ್ರಮೋದ || ಅ. ಪ.

ಹರನ ಗೆಲ್ಲ ವಶೀ-ಕರಣಮಂತ್ರವನು |
ಗಿರಿಜೆಗಿಂತು ನೀ-ನೊರೆದು ತೋರ್ದೆಯೇಂ ||
ಸರಸಿಜಾಸ್ಯೆ ನಿನ್ನ-ನರಸಿ ಬರುವನಮ್ಮ |
ಸರಸಿ ನಮ್ಮ ದೊರೆ - ವರದಕೇಶವನು || ೧





## ರಾಗ ಯೋಗಿ

ಭಕ್ತಿಯಿವಳ್ ನಾದಸುಖಾ |
ಸಕ್ತಿಯಿವಳ್ ರಾಗಯೋಗಿ ಕೇಶವಭಜನಾ ||
ರಕ್ತಿಯ ಸುಲಭೋಪಾಯದೆ |
ಮುಕ್ತಿಪದ ಪ್ರಾಪ್ತಿಯೆಂದು ಲೋಗರ್ಗ್ಗೊರೆವಳ್ ||

# ೨೪. ರಾಗ ಯೋಗಿ

**ರಾಗ—ಕೇದಾರಗೌಳ ಅಥವಾ ಮಣಿರಂಗು]** **[ತಾಳ—ಮಿಶ್ರಚಾಪು**

ವಿಜಯ ಕೇಶವ ನಿನ್ನ - ಭಜಿಸೆ ಬಂದೆನೊ ಚೆನ್ನ |
ತ್ಯಜಿಸಬೇಡವೊ ಎನ್ನ - ಮೋಹನ್ನ ‖ ಪ.

ನಿಜದ ದೈವವೊ ನೀನು - ಹೃದಯಾವೇಗವ ಬಲ್ಲೆ |
ಮೃದು ನಯದಿಂದೆಮ್ಮ - ನಡಸುವ ಸಖ ನೀನೇ ‖ ಅ. ಪ.

ಬಡಜೀವವೆಮ್ಮದು - ಕಠಿನವ್ರತದಿ ಬಾಳ |
ನುಡಿಸೆಂಬ ದೈವವ - ಪಿಡಿವುದೆ ಮನವು ‖
ಹುಡುಗನ ಹದವ ತಾ-ನರಿಯದೆ ಬೋಧೆಗೆ |
ಬಡಿತ ಸಾಧನವೆಂಬ - ಗುರುವಲ್ಲ ನೀಂ ದೊರೆ ‖ ೧

ಸಹಜವೆ ಸರಿಯೆನ್ನೆ - ಪಶುವೃತ್ತಿಗೆಡೆಯುದು |
ಸಹಜವ ಬಿಡಿರೆನ್ನೆ - ನಡೆಯದಾ ಮಾತು ‖
ವಿಹಿತ ಲೋಕಕೆ ಸಾಜ - ಗತಿಮಿತಿಯನುನಯ |
ಸಿಹಿಯಲಿ ಕಹಿಮದ್ದ - ತಾಯ್ ಕೂಸಿಗೀವಂತೆ ‖ ೨

ಸ್ನೇಹತತ್ಪರ ನೀನು - ರಸಮಯರೂಪನು |
ಮೋಹದಿಂದಲೆ ಮೋಹ-ಪಟವ ಪೋಗಿಪನು ‖
ಐಹಿಕದಿನೆ ಮೋಕ್ಷಪದಕೇಣಿಯಾಗಿಪ |
ಮಾಹಾತ್ಮ್ಯ ನಿನ್ನದು - ಗತಿ ನೀನೆನಗೆ ಸ್ವಾಮಿ ‖ ೩

---



## ಸ್ವರ್ಗಹಸ್ತೆ

ಸ್ವರ್ಗಹಸ್ತವನೇಂ ತೋರ್ಪಳ್ |
ಭಾರ್ಗವೀ ರೂಪೆ ತಾನಿರಲ್ ||
ಮಾರ್ಗಣಶ್ರಮವೇಂ ಸ್ವರ್ಗಂ |
ಸರ್ಗಲೀಲೆಯೊಳಿಲ್ಲಿರಲ್ ||

# ೨೫. ಸ್ವರ್ಗಹಸ್ತ

ರಾಗ—ಕಾನಡಾ] [ತಾಳ—ಮಿಶ್ರಚಾಪು

ಭಾವವಿದೇನೇ ಸಖೀ - ನರ್ತನಸುಖೀ ‖ ಪ.

ಭಾವವಿದೇನೇ ಓ - ದೇವಲೋಕಾಹ್ವಾನೆ |
ದಿವಿಜರಾಮೋದಕೆ - ಭುವಿಯನೊಯ್ಯುವೆಯೇನೆ ‖ ಅ. ಪ.

ಕಾಲವನಂತ ನಿನ್ನೊಲವೇನನಂತವೆ |
ದೈವವನಂತ ನಿನ್ನೊಯ್ಯಾರವಂತೇಂ ‖
ಕಾಲ ದೈವ ಲೋಕ ಸ್ವಾರಸ್ಯಗಳು ನಿನ್ನ |
ಬಾಳಿನೊಂದು ಮುಹೂರ್ತದೊಳ್ ಮೇಳವಿಪುವಲ್ತೆ ‖ ೧

ಒಂದೇ ಕ್ಷಣವೆ ನೂರು ಯುಗದಿಂ ಮೇಲೆನಿಸದೆ |
ಸೌಂದರ್ಯ ಸಾರದ ಸಂದರ್ಶನವಿರೆ ‖
ಬಂಧುರೆ ನಮ್ಮಯ ಬಂಧಮೋಕ್ಷಕೆ - ನಿನ್ನಾ - |
ನಂದವಾಹಿನಿಯೊಂದು ಬಿಂದುವೆ ಸಾಲದೆ ‖ ೨

ಚೆನ್ನೆ ನೀನಾರನು ಮನದೊಳು ನೆನೆವೆಯೆ |
ಇನ್ನೆಷ್ಟು ಯುಗ ಕಾದು ನೀನಿಂತು ನಿಲುವೆ ‖
ಬಲ್ಲನೆ ನಿನ್ನನಾ ಚೆನ್ನಕೇಶವ ಸ್ವಾಮಿ |
ಒಲ್ಲೆಯ ನೀನವನೀವ ಪ್ರಸಾದವ ‖ ೩

---



## ಕೃತಕ ಶೂಲಿ

ಕಾಲನ ನಾಂ ಜಯಿಸಿಹೆನಾ |
ಶೂಲಿಯವೋಲೆಂದು ಲೋಕಕುದ್ಘೋಷಿಸೆ ನೀಂ ||
ತಾಳಿಹೆಯೇ ನೀ ದೇವ ಕ- |
ಪಾಲಿಯ ಚಿಹ್ನೆಗಳನದರಿನೇಂ ರೌದ್ರಿಯೆ ನೀಂ ||

# ೨೬. ಕೃತಕ ಶೂಲಿ

**ರಾಗ—ಶಂಕರಾಭರಣ]** **[ತಾಳ—ತ್ರಿಶ್ರಏಕ**

ಕೃತಕ ಶೂಲಧಾರಿಣೀ - ಕಥೆಯದೇನೆ ಭಾಮಿನೀ |
ನಟನಪತಿಯ ವಿಗಡವೇಂ - ಹಿತವೆ ನಿನಗೆ ಮಾನಿನೀ || ಪ.

ಸಹಜಮಿತ್ರ ಮಾರನ - ದಹಿಸಿದ ಹರನೆಂದು ನೀಂ |
ಸಹೃದಯ ಭವವೈರದಿಂ-ದಹಿತನನವಹಸಿಪೆಯೇಂ ||
ಸಹಿಪನೇನೆ ಹರನದಂ - ಸುಹೃದ ಕೇಶವೇಶನಾ |
ಮಹಿಮೆ ನಿನ್ನ ಪೊರೆವುದೇಂ - ತುಹಿನಕರ ನಿಭಾನನೇ || ೧





ಜಯ ನಿಷಾದಿ

ಧನುವಂ ಪಿಡಿದಿರ್ದೊಡದೇಂ |
ವನಗುಲ್ಮದ ನಡುವೆ ಬೇಡರೊಡತಿಯ ಬಿರುಬಿಂ ‖
ದನುಚರಿಯರನಾಳಿದೊಡೇಂ |
ತನುಭಂಗಿಯ ರಾಮಣೀಯಕಂ ಕುಂದುವುದೇಂ ‖

# ೨೭. ಜಯ ನಿಷಾದಿ

ರಾಗ—ಸಾಂಗತ್ಯ, ಲಾವಣಿ] [ತಾಳ—ಏಕ

ಲೀಲಾನಿಷಾದಿಯೆ ಏನೇನ ಗೆಲ್ದಿಯೆ
ಏನೇನ ತಂದಿಹೆಯೇ |
ಕಾಳಿದುರ್ಗಿಯರ ಕರಾಳಸಾಹಸಿಕವ
ಪೋಲುತ ನಿಂದಿಹೆಯೇ || ಪ.

ಕಾಡುಮೇಡುಗಳೊಳಗೋಡಾಡಿ ಮೃಗಗಳ-
ನೀಡಾಡಿ ಮೆರೆಯುತಿಹೇ |
ಗೂಡೆಯ ಹೊತ್ತಿಹ ಬೇಡಿತಿ ಬಳಲಿರೆ
ನೋಡಿ ನೀಂ ನಗುತಲಿಹೇ || ೧

ಅಡಿಯಲಿ ಮುಳ್ಳಿಂದಾ ಹುಡುಗಿಯಳುತ್ತಿರೆ
ಕಡೆನೋಟ ನೋಡುತಿಹೇ |
ಕಡುಗಲಿ ನಾನೆಂದು ಸೆಡೆದು ಗರ್ವದೆ ಮೆಯ್ಯ-
ಬೆಡಗಿಂದ ಬಳುಕುತಿಹೇ || ೨

ಹುಲ್ಲೆಗಣ್ಣಿಂದಲೆ ಕೊಲ್ಲುವೆ ಪುರುಷರ
ಬಿಲ್ಲಿನ್ನು ನಿನಗೇತಕೆ |
ಭಿಲ್ಲಿತಿವೊಲು ನೀನು ಕ್ಷುಲ್ಲ ಜಂತುಗಳನ್ನು
ಕೊಳ್ಳೆಗೊಳ್ಳುವುದೇತಕೆ || ೩

ಬೇಟೆಗಾರಳ ವೇಷದಾಟವನಾಡುವೀ
ಹೂಟದರ್ಥವದೇನೆ |
ಪೋಟೆಗಾರಳೆ ನೀನು ಚೆನ್ನಕೇಶವನಿಗೆ
ಬೇಟದಾಟದಿ ಜಾಣೆ || ೪



ನಾಟ್ಯಸುಂದರಿ

ಝಲ್ಲರೀ ಝಂಕೃತಾಮೋದಮುಗ್ಧಾನನಂ |
ಮಲ್ಲಿಕಾ ಮಾಲಿಕಾಲಂಕೃತೋರಃಸ್ಥಲಂ ||
ವಲ್ಲರಾಗಾರದೊಳ್ ಚೇಟಿಕಾನರ್ತನಂ |
ವಲ್ಲಭಸ್ವಾಗತಾನಂದಸಂವೀಕ್ಷಣಂ ||

# ೨೮. ನಾಟ್ಯಸುಂದರಿ

ರಾಗ—ಬೇಗಡೆ] [ತಾಳ—ರೂಪಕ

ಸುಂದರಿ ನೀನೇ - ಸುಂದರಿ ನೀನೇ |
ಕಂದರ್ಪನ ಸಂದೇಶ ಧು-ರಂಧರಿ ನೀನೇ ‖ ಪ.

ಪದಕರ ವಿನ್ಯಾಸಗಳೇಂ |
ವದನಾಧರ ಹಾಸಗಳೇಂ ‖
ಮೃದುನಯನವಿಕಾಸಗಳೇಂ |
ಹೃದಯಾಂಗವಿಲಾಸಗಳೇಂ ‖ ಅ. ಪ.

ಮಾನಸದೊಳದಾರನು ನೀಂ
ಜಾನಿಸುತಲಿ ಪಾಡುವೆಯೇ |
ಗಾನ ಸುಧಾ ವಾಹಿನಿಯಿಂ
ಪ್ರಾಣಗಳಂ ತಣಿಸುವೆಯೇ ‖

ತಾಳತರಂಗಿತ ಗೀತೇ |
ವೇಲ್ಲಿತ ತನು ವಿದ್ಯೋತೇ |
ಕೌಸುಮ ಋತು ಪ್ರಭಾತೇ |
ಕೇಶವ ವಿಭುಸಂಪ್ರೀತೇ ‖ ೧





ಭಸ್ಮಮೋಹಿನಿ

ಸಸ್ಮಿತಾನನದಿಂದೆ ಮೋಹನ ಭಸ್ಮಧೂಳಿಯನೆರಚುತುಂ |
ವಿಸ್ಮಯಾಕುಲ ಭಸ್ಮದೈತ್ಯನ ಮತ್ತನೃತ್ತದಿ ಕುಣಿಸುತುಂ ||
ವಿಸ್ಮೃತಾತ್ಮನವಂ ಸ್ವಶೀರ್ಷವ ಸೋಂಕಲಾ ಸ್ವಕರಾಗ್ನಿಯಿಂ |
ಭಸ್ಮವಪ್ಪವೊಲೀಕೆಯ್ಯಾಡಿಸಿ ಭಸ್ಮಮೋಹಿನಿಯೆನಿಸಿದಳ್ ||

# ೨೯. ಭಸ್ಮ ಮೋಹಿನಿ*

(ಸಂಗೀತ ರೂಪಕ)

ರಾಗ—ರಾಗಮಾಲಿಕೆ : ಮೋಹನ,
ತೋಡಿ, ಇತ್ಯಾದಿ] [ತಾಳ—ಆದಿ

ಆಹಾ !—ಮೋಹಾಭಿನಯದ ಸನ್ನಾಹಾ |
ಕೇಶವನುತ್ಸಾಹಾ ‖ ಪ.

ಮೋಹಿನಿವೇಷದೆ ಭಸ್ಮದಾನವನ |
ದಾಹಿಸಿ ಧರ್ಮವ ಕಾಯ್ದ ಚರಿತೆಯಿದು ‖ ಅ. ಪ.

ಪ್ರವೇಶಕ :

ಬಂದಳ್—ಸುರಸುಂದರಿಯಿದೊ ತಾಂ ಬಂದಳ್ |
ತ್ರಿಜಗನ್ಮೋಹಿನಿಯೈತಂದಳ್ |
ಆನಂದವ ಲೋಕಕೆ ತಂದಳ್ ‖
ಕಂಕಣ ಕಿಂಕಿಣಿ ರಣಿತಕೆ ಕುಣಿಯುತ |
ಕಣ್ಕಿವಿ ಮನಗಳಿಗಮೃತವನೆರೆಯುತ ‖ ೧

---

* **ಸೂಚನೆ.**—ಈ ಹಾಡನ್ನು ನಾಟಕವಾಗಿ ಅಭಿನಯಿಸಬಹುದು. ಪ್ರಾರಂಭದಲ್ಲಿ ರಂಗವೇದಿಕೆಯ ಎರಡು ಪಕ್ಕಗಳಲ್ಲಿಯೂ ಹಿಮ್ಮೇಳದವರು,—ಒಬ್ಬೊಬ್ಬರು ಅಥವಾ ಇಬ್ಬರಿಬ್ಬರು,—ಸೇರಿ ನಾಂದಿ ಹಾಡತಕ್ಕದ್ದು. ಅದಕ್ಕೆ "ಭಜಾಮ್ಯಹಂ" ಪದ್ಯವೂ (ಪುಟ ೧೦, ಸಂಖ್ಯೆ ೬) "ಶ್ರೀ ಚೆನ್ನಕೇಶವಾ" ಗೀತವೂ (ಪು. ೧೯, ಸಂ. ೨) ಉಪಯುಕ್ತವಾಗುತ್ತವೆ. ಆಮೇಲೆ ಹಿಮ್ಮೇಳದವರು "ಸಸ್ಮಿತಾನನ" ಪದ್ಯವನ್ನೂ, (ಪು. ೭೦) ಪ್ರಸ್ತುತ ರೂಪಕದ ಪಲ್ಲವಿ ಅನುಪಲ್ಲವಿಗಳನ್ನೂ, ಬಳಿಕ ಪ್ರವೇಶಕದ ಎರಡು ನುಡಿ (ಚರಣ) ಗಳನ್ನೂ ಪೀಠಿಕೆಯಾಗಿ ಹಾಡತಕ್ಕದ್ದು. ಆಗ ಮುಖ್ಯ ಪಾತ್ರಗಳಿಬ್ಬರೂ—ಮೋಹಿನಿ, ಭಸ್ಮಾಸುರ—ವೇದಿಕೆಯ ಮೇಲೆ ಕಾಣಿಸಿಕೊಳ್ಳತಕ್ಕದ್ದು. ಅವರು ಸಂವಾದ ಅಭಿನಯಗಳನ್ನು ನಡಸುತ್ತಿರುವಾಗ ಹಿಮ್ಮೇಳದವರು ಮರೆಯಿಂದ ಅವರಿಗೆ ಜೊತೆಯಾಗಿ ಹಾಡಬಹುದು. ಸಂವಾದದ ಚರಣಗಳ ನಡುನಡುವೆ ಹಿಮ್ಮೇಳದವರು ಪಲ್ಲವಿ ಹಾಡುತ್ತಿರಬೇಕು. ಅದಕ್ಕೆ ಮೋಹನರಾಗ ಸರಿ. ಸಮಾಪ್ತಿಯಲ್ಲಿ ಹಿಮ್ಮೇಳದವರು "ವನಜಾಸನ" "ಜಯ ಜಯ ಮೋಹನ ಕೇಶವ" (ಪು. ೭೭, ಸಂ. ೩೩, ೩೪)—

ಬಂದನ್—ಭಸ್ಮಾಸುರನಿದೊ ತಾಂ ಬಂದನ್ |
ಬಂದಾ ಮೋಹಿನಿಯನು ಕಂಡನ್ |
ಕಂಡಾಕೆಯ ಬೆಡಗಿಗೆ ನಿಂದನ್ ||
ನಿಂದು ನಿರುಕಿಸುತೆ ರೂಪವಿಲಾಸವ |
ಸುಂದರಿಯೊಡನಾಡಿದನೀ ಚಾಟುವ || ೨

### ಭಸ್ಮಾಸುರ :

ಬಾರೇ—ಬಾ ನೀರೆ ಸಕಲ ಸುಖ ಸಾರೇ |
ನೀನೆನ್ನಯ ಮನವನು ಸೂರೆ- |
ಗೈದಿಹೆಯಲೆ ನೀಂ ದಯೆ ತೋರೇ ||
ಆರೆ ತಕ್ಕವನು ನಾನಲ್ಲದೆ ಶೃಂ- |
ಗಾರ ವಾರಿನಿಧಿ ನಿನ್ನೊಯ್ಯಾರಕೆ || ೩

### ಮೋಹಿನಿ :

ಆರೋ—ವೀರನ ನೀಂ ಪೋಲುವೆ ಯಾರೋ |
ನಾರೀಜನಕಥೆ ನಿನಗೇಕೋ |
ಈ ಧೂರ್ತನ ಚೇಷ್ಟಿತ ಸಾಕೋ ||
ಪಾರುವುದೆನ್ನಸು ಪೋರರ ಕಂಡೊಡೆ |
ದಾರಿವಿಡಿದು ನೀಂ ಪೋಗು ಸಾಗೆಲವೊ || ೪

### ಭಸ್ಮಾಸುರ :

ಕೇಳೇ—ನಾನೇ ದೊರೆ ಜಗಕೆಲೆ ಬಾಲೆ |
ಸರಿಯೆನಗಿಲ್ಲವೆ ಸುಖಲೋಲೆ |
ಮೂಲೋಕಕಮೊಡೆಯನು ನಾನೇ ||
ಹರನನೊಲಿಸಿ ನಾಂ ವರವನು ಗಳಿಸಿಹೆನ್ |
ಅರಿಯ ಸುಡುವೆನೀ ಬೆರಲ ಸೋಂಕಿಸಿಯೆ || ೫

---

ಈ ಎರಡು ಪದ್ಯಗಳನ್ನು ಹಾಡಿ "ಶ್ರೀ ವಿಷ್ಣುಸಮ್ರಾಜ್ಞೀ" (ಪು. ೧೨೭, ಸಂ. ೬೦) ಗೀತವನ್ನು ಮಂಗಳವಾಗಿ ಹಾಡತಕ್ಕದ್ದು.

**ಮೋಹಿನಿ :**

ವೀರಾ—ನೀನಾರ ಗೆಲ್ದಿಹೆಯೊ ಧೀರ |
ಆವುರಿಬೆರಲಿಂದುಪಕಾರ- |
ವೇನೆಸಗಿಹೆ ಬೆಂಕಿಯ ಶೂರ ||
ಕೊಳ್ಳಿಕೈಯಿನ್ ಏನೊಳ್ಳಿತನೆಸಗಿದೆ |
ಉಲ್ಲಾಸವದೇಂ ದಳ್ಳುರಿಯಾಟದಿ || ೬

**ಭಸ್ಮಾಸುರ :**

ಭಾಮೇ—ಎನಗಾರೆದುರೆಲೆ ಸುಪ್ರೇಮೇ |
ಹೆದರುವೆ ನಾನಾರಿಗೆ ರಾಮೇ |
ಎನ್ನವಳಾಗೆಲೆ ಸುಖಸೀಮೇ ||
ಸದೆದು ಸುರರನಾನೊದೆದಿಹೆನಿಂದ್ರನ |
ವಿಧಿ ಹರಿ ಶರ್ವರು ಬೆದರಿ ಧಾವಿಪರು || ೭

**ಮೋಹಿನಿ :**

ವೀರಾ—ನಿನಗೆನ್ನೊಡನೇನು ವಿಚಾರ |
ಶೂರರ ನೀನರಸೆಲೊ ಶೂರಾ |
ಹೋರಾಟವೆ ನಿನಗೆ ವಿಹಾರಾ ||
ನೀರೆಯರೆಡೆ ನೀನೇನ ಸಾಧಿಸುವೆ |
ಸಾರು ಶೂರರೆಡೆ—ಸಾರೆಲೊ ದೂರಕೆ || ೮

**ಭಸ್ಮಾಸುರ :**

ಪ್ರೀತೇ—ನಿನಗೆನ್ನೆಲ್ಲವ ನಾಂ ಸೋತೆ |
ನಿನ್ನೊಲವನೆ ಬೇಡುವೆ ದಾತೇ |
ನೀಂ ಕನಿಕರಿಸೆಲೆ ವಿದ್ಯೋತೇ ||
ಸುಧೆಯ ನಿಧಿಯೆ ನಿನ್ನಧರವ ಸವಿಯದೆ |
ಬದುಕೆನಗೇತಕೆ ? ವರಬಲವೇತಕೆ || ೯

ಮೋಹಿನಿ :

ಮಾಣೋ—ನೀನೆನ್ನೊಳು ಬಯಕೆಯ ಮಾಣೋ |
ವ್ರತಚಾರಿಣಿಯೋ ನಾಂ ಕಾಣೋ |
ನೀಂ ವ್ರತವ ಮುರಿಯೆ ಸುಖವೇನೋ ||
ಆತುರದಿಂ ನೀನೆನ್ನ ಸೋಕಿದೊಡೆ |
ಬೂದಿರಾಶಿ ನಾನಾಗದೆ ನಿಲುವೆನೆ || ೧೦

ಭಸ್ಮಾಸುರ :

ಏನೇ—ಆ ನಿನ್ನಯ ಸೊಂಪಿಯದೇನೇ |
ನಾನದನು ಮುರಿಯೆನೆನ್ನಾಣೇ |
ಆ ವ್ರತವ ನಡೆಯಿಪೆನೆ ಜಾಣೇ ||
ನಿನ್ನ ಸಿರಿಗೆ ನಾನಲುಗುವೆನೆಲೆವೊಲು |
ಧನ್ಯನ ಗೆಯ್ ನಿನ್ನಿಂಗಿತವನು ನುಡಿ || ೧೧

ಮೋಹಿನಿ :

ಕೇಳೋ—ಬ್ರಹ್ಮನ ಸುತೆ ನಾಂ ಸ್ವಾಯತ್ತೇ |
ನರ್ತನ ಲಲಿತ ಕಲಾಸಕ್ತೇ |
ನಾಂ ಪಶುಚೇಷ್ಟಿತಕೆ ವಿರಕ್ತೇ ||
ನೃತ್ಯದೊಳೆನಗೀಡಲ್ಲದ ಪುರುಷನ |
ಮುಟ್ಟೆನು ನಾನದು ನಿಶ್ಚಯ ಶಪಥವೊ || ೧೨

ಭಸ್ಮಾಸುರ :

ರಾಣೀ—ಕಲಿಸಾ ನೃತ್ಯವ ಬಿನ್ನಾಣೀ |
ನೀಂ ಗುರುವಾಗೆಲೆ ಸುಶ್ರೋಣೀ |
ನಾಂ ಶಿಷ್ಯನಹೆನೆ ಶುಕವಾಣೀ ||
ಚಿತ್ತೇಶ್ವರಿ ನಿನ್ನೊಲುಮೆಯ ಗಳಿಸಲು |
ನೃತ್ತವನಾಡುವೆ ನೀನಾಡುವವೊಲು || ೧೩

ಮೋಹಿನಿ :

ಭಾಪು—ಮಝು ಭಾಪು ಭಾಪು ಸುಕುಮಾರ |
ಕುಣಿಯಲು ನೀಂ ಬಾರೆಲೊ ಧೀರ |
ಪರಿಕಿಪೆ ನಾಂ ನಿನ್ನಸು ಪೂರ ||
ಥಾ ಥಕಿಟವೆನೆ ಬಲಗಾಲಿಂತಿಡು |
ಥೈ ತದ್ಧಿಮಿಯೆನಲೆಡಗಾಲಿಂತಿಡು || ೧೪

ಭಸ್ಮಾಸುರ :

ಹಾ ಹಾ !—ಏನಿದು ಸುಖ ಹೃದಯಾವೇಶಾ |
ಮೈಮರಸುವುದೀ ಸಂತೋಷಾ |
ಸರ್ವಾಂಗದ ಸುಂದರ ಲಾಸಾ ||
ದಾಸನಾದೆ ಓ ಭಾಮೆ ನಿನ್ನಡಿಗೆ |
ಆಶೆಯನರಿತು ಹಸಾದವ ನೀಡೆಲೆ || ೧೫

ಮೋಹಿನಿ :

ತತ್ತೋಂ—ಇಂತಾಗಿಸು ಬಲಗಾಲ್ಕೊಂಕ |
ತತ್ಥೈ ನಡು ಡೊಂಕ ತಕಥೋಂ |
ಇಂತಾಗಿಸು ಕೊರಳೊಳು ವಂಕ ||
ಕಲಿತೆ ಧರಿಸಲೀ ತ್ರೈಭಂಗಿಯು ನೀಂ |
ಬಲುಹುಗಾರ ಇನ್ನೊಂದು ಗತಿಯ ನಡೆ || ೧೬

ಭಸ್ಮಾಸುರ :

ಕಾಂತೇ—ನಾನಾಡುವೆ ನೀಂ ತೋರ್ಪಂತೆ |
ನಿನ್ನೆವೆಯ ಸನ್ನೆಯಾದಂತೆ |
ನಿನ್ನೊಡಲಿಗೆ ನಾಂ ನೆಳಲಂತೆ ||
ಚರಣದೆ ಚರಣವ ಕರದೆ ಕರವನನು- |
ಕರಿಸುತಲಾಂ ವರ ಶಿಷ್ಯನಾಗುವೆನೆ || ೧೭

ಮೋಹಿನಿ :

ನೋಡು—ಈ ಮೋಹನ ನೃತ್ಯವನಾಡು |
ನಿನ್ನಾನಂದಕ್ಕಿದು ಬೀಡು |
ಇದನಾಡಿ ಬೇಗ ಮುದಗೂಡು ‖
ನನ್ನಂತೆಯೆ ನೀಂ ಕುಲುಕೆಲ್ಲಂಗವ |
ಚೆನ್ನಾಗುವುದೆಲ್ಲವುಮೊಳಿತಪ್ಪುದು ‖ ೧೮

ಭಸ್ಮಾಸುರ :

ಅಂತೇ—ನಾನಾಡುವೆ ನೋಡೆಲೆ ಕಾಂತೇ |
ನಿನ್ನೊಡಲ ಲಘುವ ನಾನಾಂತೇ |
ನೀಂ ಮೆಚ್ಚಲೆನಗೆ ನಿಶ್ಚಿಂತೇ ‖
ತ್ವರಿತದಿ ಮುಗಿಯಿಸು ನಿನ್ನೀ ಶಿಕ್ಷೆಯ |
ಕರುಣಿಸೊಡನೆ ನಾಂ ಬೇಡಿದ ಭಿಕ್ಷೆಯ ‖ ೧೯

ಮೋಹಿನಿ :

ಈಗಾ—ಸಂಪೂರ್ಣದ ಗತಿಯಾವೇಗಾ |
ಬಾಗಿದ ಬಲಗಾಲಿಡು ಥತ್ತೈ |
ಎಡಗೈಯೆಡ ಕಟಿಗಿಡು ತತ್ತೋಂ ‖
ಥಕ್ಕಿಟ ಬಲತೋಳನು ಬೀಸೊಯ್ಯನೆ |
ಮಸ್ತಕಕಿಡು ನೀಂ ಮುಕುಟವ ಕೈಯಿನೆ ‖ ೨೦

ಭಸ್ಮಾಸುರ :

ಆಹಾ—ಏನೀ ವಿನ್ಯಾಸವೆ ಹೋ ! ಹೋ !!
. . . . . . . . ‖ ೨೧

(ತಲೆಗೆ ಕೈ ಸೋಕಿದೊಡನೆ ಭಸ್ಮಾಸುರನಿಂದ ಬೆಂಕಿಯುರಿಯೆದ್ದು, ಬೂದಿರಾಶಿ ಬೀಳುವುದು. ಮೋಹಿನಿ ಅದೃಶ್ಯಳಾಗುವಳು. ಹಿಮ್ಮೇಳ ಹಾಡುತ್ತಿರುವುದು.)

ಹಿಮ್ಮೇಳ :

ಹೋಹೋ !—ಹೋ ! ಭಸ್ಮನೀಗ ತಾಂ ಭಸ್ಮ |
ಆ ಹರವರ ಕರ ಶಿಖಿಯೂಷ್ಮ-|
ಕ್ಕಾಹುತಿ ತಾನಾ ವಿಕೃತಾತ್ಮ ||
ಆಹಾ ಏನದ್ಭುತವೀ ನಾಟ್ಯ |
ಮೋಹನ ಕೇಶವ ಹಿತ ಕಾಪಟ್ಯ || ೨೨



ವನಜಾಸನಕೃತಿವನದೊಳ್ |
ತನಿವಣ್ಗಳ ಮರೆತು ಮುಳ್ಳುಕೋಲರಸುವುದೇಂ ||
ಪ್ರಣಯ ಸುಮ ವರವ ತೊರೆಯುತ-|
ಲನಲೋಲ್ಮುಕ ವರವ ಬಯಸೆ ವಿಧಿ ವಿಗಡಿಸನೇಂ || ೨೩

ಜಯ ಜಯ ಮೋಹನ ಕೇಶವ |
ನಯನೋತ್ಸವವೇಷ ರಸಿಕಚಕ್ರಾಧಿಪತೇ ||
ಪ್ರಿಯ ಜಯವ ಜಗದೊಳಾಗಿಸಿ |
ನಯಧರ್ಮವ ಕಲಿಪ ಗುರುವೆ ನಿನಗಕ್ಕೆ ಜಯಂ || ೨೪





ನೀಲಾಂಬರೆ

ದೃಷ್ಟ ವೃಶ್ಚಿಕಾ ।
ನಷ್ಟ ವೇಷ್ಟಿಕಾ ॥
ಸ್ಪೃಷ್ಟ ಕನ್ಯಕಾ ।
ಹೃಷ್ಟ ಲೌಕಿಕಾ ॥

# ೩೦. ನೀಲಾಂಬರೆ

ರಾಗ—ನೀಲಾಂಬರಿ] [ತಾಳ—ಮಿಶ್ರಚಾಪು

ಏನೀ ಭಯ ಭ್ರಾಂತಿಯೇ - ನೀಲಾಂಬರೆ |
ಏನಂಗ ವಿಭ್ರಾಂತಿಯೇ - ಅಶಾಂತಿಯೇ || ಪ.

ನೀಲಾಂಬರದ ನಿರಿ-ಯಾಲಯ ತನಗೆಂದು |
ಚೇಳಿಗಾರರುಹಿದರೇ - ಮನೋಹರೆ || ಅ. ಪ.

ಹೇಮಾಂಗರಾಗಕೆ - ಶ್ಯಾಮಾಂಬರಚ್ಛವಿ |
ರಾಮಣೀಯಕವೆಂದು - ಭಾಮೆ ನೀಂ ಬಗೆದು ||
ಕ್ಷ್ಮಾಮವ ಕೊಳ್ಳಲೀ - ಭೀಮೋತ್ಪಾತವಿದೇನೆ |
ಸೌಮ್ಯನಾಯಕೀ ವರ-ಸ್ವಾಮಿಯೇ ಗತಿಯಲ್ತೆ || ೧

ಬೆಚ್ಚಿಸಿ ನಿನ್ನನು - ನಿಶ್ಚೇಲಗೈದು ತ-|
ನ್ನಕ್ಷಿಗೆ ಸಿಂಗಾರ-ದೂಟವನುಣಿಸೆ ||
ವೃಶ್ಚಿಕ ಮಂತ್ರವ-ನುಚ್ಚರಿಸಿದನೇನೆ |
ಅಚ್ಚುಮೆಚ್ಚಿನ ನಿನ್ನ - ಮಾಯಾವಿ ಕೇಶವ || ೨





**ಹಾವ ಸುಂದರಿ**

ಅಭಿನಯ ಚಟುಲಾಂಗೀ ಮನ್ಮಥಾಹ್ವಾನಭಂಗೀ ।
ಶುಭಕರ ಕರಮುದ್ರಾ ಜಾನುಬಂಧೂರಭದ್ರಾ ॥
ನಭನಿಭತನುಮಧ್ಯಾ ವಾದ್ಯಸಂಗೀತಹೃದ್ಯಾ ।
ತ್ರಿಭುವನಪರಿತೋಷಾ ಸುಂದರೀ ನೃತ್ಯವೇಷಾ ॥

## ೩೧. ಹಾವ ಸುಂದರಿ

ರಾಗ—ಕಮಾಸು] [ತಾಳ—ಆದಿ

ಸರಸವನಾಡೆ ನೀಂ - ಕರೆವುದದಾರನೆ |
ವರಿಸೆ ನಿನಗೆ ತಕ್ಕಾ - ತರುಣನೆಲ್ಲಿರ್ಪನೇ ‖ ಪ.

ಹಲವು ತೆರನಲ್ಲವೇ - ಚೆಲುವಿನ ಸವಿ ಬಾಲೆ |
ಚಲದಿ ನೀ ನಿಂತು ಹಂ-ಬಲಿಸಲೊಲಿವನೇನೆ ‖ ಅ. ಪ.

ಹಾವ ಚಾತುರ್ಯಂಗಳ-ನರಿತವನಾತನೇ |
ಭಾವಜಶೌರ್ಯವ-ನಳಿದವನಾತನೇ ‖
ಜೀವದಂತರಂಗವ-ನಾಳುವನಾತನೇ |
ತೀವಿದ ಪ್ರೇಮವ - ಪರಿಯಿಪನಾತನೇ ‖ ೧

ಮೊಗಗಳ ಸಾಸಿರ - ಕಂಡವನಾತನೇ |
ಸೊಗಗಳ ಸಾಸಿರ - ಉಂಡವನಾತನೇ ‖
ಜಗದಿ ನೀನೊಬ್ಬಳೆ - ಸೊಗಸಿಗೆ ನೆಲೆಯೇನೆ |
ಬಗೆಯದೆ ವರಿಸನಾ - ಚೆನ್ನಕೇಶವ ಜಾಣೆ ‖ ೨





## ಶಕುನ ಶಾರದೆ

ಕಣಿ ಪೇಳುವೆಯೇನಜರಾಣಿಯೆ ನೀ- |
ನಿನಿಯರ್ಗ್ಗಿನಿಯರ್ ದನಿಗೂಡಿಸರೇಂ ||
ಜನಮೆಂದಹುದೋ ಮನದೊಳ್ ಸರಸಂ |
ಪಣೆಲೆಕ್ಕವ ನೀಂ ಗುಣಿಸುತ್ತಿಹೆಯೇಂ ||

## ೩೨. ಶಕುನ ಶಾರದೆ

ರಾಗ—ಆನಂದಭೈರವಿ] [ತಾಳ—ಮಿಶ್ರಚಾಪು

ಶಾರದೆ ತತ್ತ್ವಾರ್ಥ ನೃತ್ಯವಿಶಾರದೆ।
ಜೀವಕಲಾಕೋವಿದೇ - ಸಂಮೋದೇ ॥ ಪ.

ಪ್ರಸ್ತುತಲೋಕದ ಮಸ್ತಕಲೇಖ್ಯದ।
ಪುಸ್ತಕದರ್ಥವ ವಿಸ್ತರಿಸುವೆಯೇನೆ ॥ ಅ. ಪ.

ಬ್ರಹ್ಮಾಂಡವಿಭ್ರಮ ಮರ್ಮವಿದೇನಮ್ಮ
ಚಿನ್ಮುದ್ರಿಕಾ ಧಾರಿಣೀ।
ನಿರ್ಮಲಸತ್ತ್ವಕೆ ಭೌಮಾಂಗವೇಕಮ್ಮ
ಸಂಮೋಹನಾ ಕಾರಿಣೀ।
ಕೂರ್ಮೆಯ ಹೂವೊಳು ಕೂರ್ಮೊನೆ ಮುಳ್ಳೇಕೆ।
ಸೌಮ್ಯಕೇಶವ ರಾಜ್ಯ ದೈವಜ್ಞಮೌಳಿಕೆ ॥ ೧





ವೀಟೀಧರೆ

ಶಶಿಸ್ಮಿತಳ್ ವೀಜನ ವೀಟಿಕಾನ್ವಿತಳ್ |
ಕುಶೀಲವ ಪ್ರೇರಿತ ನೃತ್ಯ ಸಂಯತಳ್ ||
ರಸಜ್ಞನೈತಪ್ಪ ನಿರೀಕ್ಷೆಯಿಂದಿವಳ್ |
ಸುಸಜ್ಜಿತಳ್ ನಿಂದಿಹಳೇಕಭಾವದಿಂ ||

# ೭೭. ವೀಟೀಧರೆ

ರಾಗ—ಫರಜು] [ತಾಳ—ಮಿಶ್ರಚಾಪು

ವೀಟೀಧರೇ - ಚಾಟು ಚತುರೇ - ಮನೋಹರೆ |
ಪಾಟೀರ ಸಂ-ಸಿಕ್ತ ಚಮರೇ - ಓ ಮಾಧುರೆ || ಪ.

ವೀಳೆಯದೊಳಿಗದೆ - ಬಾಳ ಸೊಂಪೇರಿಸುತೆ |
ಆಲವರ್ತದಿಂದಲಾ-ಯಾಸವ ಬೀಸಾಡುತೆ ||
ಲೋಲದೃಶಾ ತಂತುವಿಂ - ಜಾಲವನೆಯ್ದೊಡ್ಡುತ್ತೆ |
ಲೀಲೆಯಿಂದೀ ಲೋಗರ - ಮಾರನ ಪಾಲಾಗಿಪೆ || ೧

ಚಿನ್ನದ ಚಿಗುರಿನ - ಪರ್ಣವ ನೀನಾಯ್ದೆಯ |
ಚೂರ್ಣ ಪೂಗದ್ರವ್ಯವ - ಪನ್ನೀರೊಳಗೂರಿಟ್ಟೆಯ ||
ನಿನ್ನ ಚೆಂಗೈಯಿಂದಲೆ - ಸುಣ್ಣವ ಪೂಸಿರ್ಪೆಯ |
ಚೆನ್ನ ಕೇಶವಂಗೆ ಸಂ-ಪನ್ನವೇನೀ ತಂಬುಲ || ೨





## ನಾಗವೈಣಿಕೆ

ನರನಾರೀ ಹೃದಯಂಗಳ |
ಚಿರಂತನಾಲೋಲ ಘರ್ಷ ಘೂರ್ಣನ ಲೀಲಾ - |
ಪರಿಪಾಟಿಯ ತೋರಿಪಳೀ |
ಸುರನರ್ತಕಿ ನಾಗವೈಣಿಕಾ ಸ್ವರಗತಿಯಿಂ ||

## ೩೪. ನಾಗವೈಣಿಕೆ

ರಾಗ—ಶಂಕರಾಭರಣ] [ತಾಳ—ಏಕ

ಧೃತ ನಾಗವೀಣೇ - ಶ್ರುತಿ ರಮ್ಯಗಾನೇ |
ಸ್ಮಿತವಿದ್ಯುದುನ್ಮೇಷಣೇ |
ಅತಿಮರ್ತ್ಯವಾಣೀ - ಗತಿಚಿತ್ರಯಾನೀ |
ನಟರಸಿಕಾಹ್ಲಾದಿನೀ ‖ ಪ.

ಝುಂಝುಣು ಝುಣಿತೇ - ಮಂಜುಲ ಹಸಿತೇ |
ಶಿಂಜಿತ ಪದ ಚರಿತೇ |
ಕಿಂಕಿಣೀ ರಣಿತೇ - ಶೃಂಗಾರ ಭಣಿತೇ |
ಭಂಗ ತರಂಗ ಗತೇ ‖ ೧

ನೃತ್ತದೂಳಿಗವೇ ತೃಪ್ತಿಯೆ ನಿನಗೆ |
ಮತ್ತೇನ ಬೇಡುವೆಯೆ |
ಪೃಥ್ವೀಮನ್ಮಥಿನೀ ನಿತ್ಯಸಂಸರಿಣೀ |
ಧೂರ್ತಕೇಶವ ಕಾಮಿನಿ ‖ ೨





ಭೂಷಣಪ್ರಿಯೆ

ತರಣಿಗೆ ದೀಪೋತ್ಸವವೇಂ |
ತರುಣೀ ನಿನ್ನಂಗರುಚಿಗೆ ಮಣಿಭೂಷಣಮೇಂ ||
ಕರೆಕರೆಯೇತಕೆ ? ಬೇಡದ |
ಕರವಲಯವ ಬಿಸುಟು ತಾಳು ಹರುಷವ ಮುಖದೊಳ್ ||

# ೩೫. ಭೂಷಣಪ್ರಿಯೆ

ರಾಗ—ಬಿಲಹರಿ] [ತಾಳ—ಮಿಶ್ರಚಾಪು

ಆಭರಣ ನಿನಗೇತಕೇ - ಸಖಿಯೇ |
ಆಭರಣ ನಿನಗೇತಕೇ || ಪ.

ಸ್ವಾಭಾವಿಕದ ರೂಪ-ಸೌಭಾಗ್ಯವಿರೆ ಬೇರೆ |
ಆಭರಣ ಭಾರವೇಕೇ - ಸಖಿಯೇ || ಅ. ಪ.

ಬಳೆಯು ನೀನಿದನೀಗ ತೊಡುವ ಚಿಂತೆಯದೇಕೆ |
ಮದುಮಗಳವೊಲು ನಿನಗೆ ಚಾಪಲ್ಯವೇಕೆ ||
ಬಡನಡುವ ಬಾಗು ಬೆಡಗಿಗೆ ನಲಿಯದನ ಕಣ್ಣು |
ಒಡವೆಗೊಲಿವುದೆ ತಕ್ಕುದೇ - ಸಖಿಯೇ || ೧

ಪರಿಚರೆಯು ತೋರುತಿಹ - ಕುರುವಿಂದದಲಿ ನೋಡು |
ಮರೆಯಿಸವೆ ನಿನ್ನ ಮೆಯ್ಸಿರಿಯು ತೊಡವುಗಳು ||
ಸುರಯಿ ಮಾಲೆಯು ವರವ - ಸರಸ ಕೇಶವದೂತಿ |
ಕರುಣಿಪಳು ಧರಿಸು ನೀನು - ಸಖಿಯೇ || ೨





ಕೇಳೀನಿರತೆ

ವೇಣುವ ತಾಂ ಬಾಜಿಸಲುಂ |
ಬಾನೊಳು ತಾಂ ಗಾಳಿಪಟವ ಬಿಟ್ಟಾಡಿಸಲುಂ ||
ವಾಣಿನಿವೊಲು ನರ್ತಿಸಲುಂ |
ಏನೆಸಗಲುಮಿವಳ ಸೊಬಗು ಮಾಸದುದಲ್ತೇ ||

# ೩೬. ಕೇಳೀನಿರತೆ

ರಾಗ—ಸಿಂಹೇಂದ್ರ ಮಧ್ಯಮ] [ತಾಳ—ಮಿಶ್ರಚಾಪು

ಕೊಳಲನೂದುವರಾರೆ - ನಲವ ಸೂಸುವರಾರೆ |
ತಿಳಿದು ನೀಂ ಪೇಳೆಲೆ ಗೆಳತೀ - ಸನ್ನುತಮತಿ ‖ ಪ.

ಕೊಳಲ ರಾಗಂಗಳ ಹೊಳೆಯೊಳು ನಮ್ಮಸು |
ಮುಳುಗಿಸಿ ತೇಲಿಪೀ ಚಲದಾಟವೇನೇ ‖ ಅ. ಪ.

ಹುತ್ತದೊಳಗೆ ಹಾವು - ಸುತ್ತಿ ನಿದ್ರಿಸುವಂತೆ |
ಚಿತ್ತಬಿಲದಿ ಭಾವ - ಸುಪ್ತಿಯೊಳಿರಲು ‖
ಕುತ್ತುವ ಭಲ್ಲೆಯ-ವಾಯಿತೀ ಗಾಯನ |
ವೆತ್ಯಾಸವೇನೋ - ಎನ್ನೆದೆಯೊಳಾದಂತಿದೆ ‖ ೧

ಸಂಸಾರ ತಾಪಂಗ-ಳನುಭವಗಳ ಕೇಳಿ |
ಸಾಂತ್ವನಗಳ ಪೇಳ್ವ ಸಖನವೊಲಿಹುದೇ ‖
ವಂಶೀವಿನೋದಿಯ ಕಂಸನಿಷೂದಿಯ |
ಪ್ರಾಂಶು ಕೇಶವನ ಕೃಪಾಂಶವಿದೇನೆ ‖ ೨





**ಕೊರವಂಜಿ**

ಕೊರವಂಜಿಯ ವೇಷದಿ ಬಂದೊಡದೇಂ |
ಶರದೈಂದವಹಾಸವ ಮುಚ್ಚಿಹೆಯೇಂ ||
ಕರದೊಳ್ ಡಮರೇಂ ಚಿಟಿತಾಳಗಳೇಂ |
ಸ್ಮರಕೀರ್ತನೆಗೀ ಕರಣಂ ಸರಿಯೇಂ ||

# ೩೭. ಕೊರವಂಜಿ

ರಾಗ—ಹುಸೇನಿ] [ತಾಳ—ರೂಪಕ

ನಟನವಾಡಿದಳ್ - ತರುಣಿ ನಟನವಾಡಿದಳ್ |
ಕಟುಮುಖಾಭಿನಯಗಳಿಂದೆ ‖ ಪ.

ಕೊರವಿತಿವೊಲು ವೇಷತೊಟ್ಟು |
ಸ್ಮರನ ಗುಟ್ಟ ಮನದೊಳಿಟ್ಟು ‖ ಅ. ಪ.

ಡಮರು ಢಣರು ಢಂಢಣರೆನೆ |
ಚಿಟಿಕೆ ತಾಳ ಚಟ ಚಟವೆನೆ ‖
ಕುಲುಕಿ ಬಳುಕಿ ಬಳ್ಳಿಯೊಡನೆ |
ಒಲಿದು ನಲಿದು ಕುಣಿದು ಲಲನೆ ‖ ೧

ಈಶತಾಂಡವದವೊಲೊಮ್ಮೆ |
ರಾಸರಭಸದಿಂದಲೊಮ್ಮೆ ‖
ಆಶೆನೋಟದಿಂದಲೊಮ್ಮೆ |
ಕೇಶವೇಶ ದಾಸಿಯಿವಳು ‖ ೨





## ಕೀಶರುಷ್ಟೆ

ಮಾನವೊ ಪೀನಾಂಗ ವ್ಯಾ- |
ಧೂನನವೋ ರೂಪಧನೆಯ ಭಾಗ್ಯವಿಶೇಷಂ ||
ವಾನರ ಸಂಪ್ರಶ್ನೆಯಿದನ್ |
ಮಾನವರೇನೊಪ್ಪಿಕೊಳುವರೋ ತಪ್ಪಿಪರೋ ||

# ೩೮. ಕೀಶರುಷ್ಟೆ

**ರಾಗ—ಕಾಂಭೋಜ]** **[ತಾಳ—ಮಿಶ್ರಚಾಪು**

ರೋಷವಿದೇನೇ ಸಖೀ - ಓ ಸುಮುಖೀ |
ಸುಮುಖೀ ಪ್ರಮುಖೀ ಸ್ಮರಪಂಜರಶುಕಿ ‖ ಪ ‖

ರೋಷವಿದೇತಕೆ - ದೋಷವದೇನಾಯ್ತೆ |
ಕೀಶಲೀಲೆಯ ಪರಿ-ಹಾಸಕೆ ಮುನಿವುದೆ ‖ ಅ. ಪ.

ಉಡಿಗೆಯನೆಳೆಯೆ ನಿ-ನ್ನೊಡಲಿನೊಯ್ಯಾರದ |
ಬೆಡಗು ಕಣ್ಗಳಿಗೆ ನೂ-ರ್ಮಡಿ ಸೊಗಸಾಯ್ತೇ ‖
ಬಿಡು ರೋಷದೃಷ್ಟಿಯ - ಬಿಸುಡಾ ದ್ರುಯುಷ್ಟಿಯ |
ಹುಡುಗಾಟದೀ ಹುಚ್ಚು - ಕೇಶವನಿಗೆ ಮೆಚ್ಚು ‖ ೧





## ಪಾದಾಂಗುಳೀಯೆ

ಧರಿಸಲ್ ಪಾದಾಂಗುಳ್ಯಾ - |
ಭರಣವನ್ ಇವಳೇಕಪಾದ ತಪವಂ ಗೆಯ್ವಳ್ ||
ಸುರುಚಿಯದು ನೋಳ್ಪರಿಗೆ ಸಂ - |
ಸ್ಫುರಿಸಲ್ ತನುವೆಲ್ಲ ಮಾಧವೀವಲ್ಲಿಯವೋಲ್ ||

# ೩೯. ಪಾದಾಂಗುಳೀಯ

ರಾಗ—ಹಿಂದೋಳ] [ತಾಳ—ಮಿಶ್ರಚಾಪು

ಕಾಲುಂಗುರ ನೆವವೇ - ಬಾಲಾಮಣಿ || ಪ.

ಕಾಲುಂಗುರ ನೆವ - ಲೋಲಾಂಗಕಾಯಿತೆ |
ವಲ್ಲೀ ತೋರಣಗುಚ್ಛ-ವಾಲಿಂಗ್ಯವಾಯಿತೆ || ಅ. ಪ.

ಚಾರುವಾಮಾಂಘ್ರಿಗೆ - ಚಾರೆಯುಂಗುರವನು |
ಧಾರಯ್ಸೆ ಪಿಡಿದಿರೆ - ನೀರೆ ನೀನೊಲಿದು ||
ಓರಡಿಯಿನೆ ನಿಂತೆ - ವೀರವ್ಯಾಯಾಮವ |
ತೋರುವಾತುರವೇನೆ - ನಾರೀ ಶಿರೋಮಣಿ || ೧

ರಾಕೇಂದುಮುಖಿ ನಿನ್ನೀ - ಏಕಪಾದದ ತಪ |
ನಾಕವಾಸಿಗಳನಾ-ರಾಧಿಪ ಪರಿಯೇಂ ||
ಲೋಕದ ಬೇಗೆಯು - ಪೋಗಿಪುದದು ನಮ್ಮ |
ಶ್ರೀ ಕೇಶವೇಶನ - ಕೃಪೆಯು ಸಾಧಿಪುದೇನೆ || ೨





ವಿಕಟ ನರ್ತಿನಿ

ಕೇಶದ ಭರವೇಂ ನಿನ್ನೀ |
ಮೀಸೆಯ ಸಾಜತೆಯ ತೋರಿಪುದೆ ವಿಕಟಮುಖೀ ||
ಮೋಸವನು ನಿನ್ನ ಬಡನಡು |
ಪೋಷಿಪುದೇಂ ಕಾಲಿನುಂಗುರಂ ಘಲಿರೆನದೇಂ ||

## ೪೦. ವಿಕಟನರ್ತಿನಿ

**ರಾಗ—ಮಧ್ಯಮಾವತಿ]** **[ತಾಳ—ಏಕ**

ಮುದ್ದಿನ ವಿಕಟೆಯ ನೋಡೇ - ಎಲೆ |
ಮದ್ದಲೆ ರಭಸದ ಕುಣಿತವ ನೋಡೇ ‖ ಪ.

ಮದ್ಯವನುಂಡಿಹಳೇನೇ - ಭಂಗಿ |
ಮದ್ದನು ಸೇವಿಸಿ ಹುಚ್ಚಾದಳೇನೇ ‖ ಅ. ಪ.

ಪುರುಷನ ಮುಖವಾಡವೇನೇ - ಈ |
ಒರಟಾಟಗಳ ದೇವನೆಡೆ ಮಾಳ್ಪರೇನೇ ‖
ಶಿರದಲ್ಲಿ ಹಿರಿಯ ಕೊಪ್ಪೇನೇ - ನಿನ್ನ |
ಕೊರೆಯುವ ತೆಳುನಡು ಕಾಲಾಳಿಯೇನೆ ‖ ೧

ತದ್ಧಿಮ್ಮಿ ತಕಧಿಮ್ಮಿ ಧಿಮ್ಮಿ - ಈ |
ಗದ್ದಲವೇ ನಿನ್ನ ಹಬ್ಬವೇನಮ್ಮಿ ‖
ನಿದ್ದೆಯ ಕೆಡಿಸಿದೊಡಮ್ಮೀ - ನಿನ್ನ - |
ನೊದ್ದು ಬೀಳಿಸಿಯಾನು ಕೇಶವನಮ್ಮೀ ‖ ೨





ಗಾಂಧರ್ವದೇವಿ

ಮೋಹನಾಂಬುಧಿಯುತ್ತರಂಗ ಧೋರಣಿಯಿಂ |
ದೇಹದಂಗಕವಿಭ್ರಮಂಗಳಿಂಬುಗೊಳಲ್ ||
ರೋಹಿಣೀಪ್ರಿಯವಕ್ತ್ರ ಬಿಂಬಕಾಂತಿಗಳಿಂ- |
ದೀಹಿತಳ್ ಜಗಕಿವಳ್ ನಾಕನರ್ತಕಿವೋಲ್ ||

# ೪೧. ಗಾಂಧರ್ವದೇವಿ

ರಾಗ—ಮಣಿರಂಗು] [ತಾಳ—ಮಿಶ್ರಚಾಪು

ಆನಂದ ರಸ ಸನ್ನಿಧಾನೇ - ದೇವಿ |
ಗಾಂಧರ್ವ ವೇದ ನಿದಾನೇ - ಸನ್ಮಾನೇ || ಪ.

ಕಂಪಿತ ಮಾಧವೀ ವಲ್ಲೀ ಬಂಧುರ ಬಾಹು |
ಶಂಪಾಲಸನ್ನೇತ್ರೆ - ಚಾಂಪೇಯಗಾತ್ರೆ ||
ಚಂಪಕನಾಸಿಕೆ - ಬಂಭರಕೈಶಿಕೆ |
ಅಂಭೋಜಭವ ಹೃದ್ಯ ಕಾವ್ಯಪ್ರತೀಕೆ || ೧

ಪಾರಿವಾಳದ ಕಿರುಗೊರಲ ಕೊಂಕಿನ ನುಣ್ಪು |
ಸಾರಸಿ ಸರದೊಳ್ ಈಜಾಡುವಲಂಪು ||
ಶಾರಿ ರಸಾಲದೊಳೆರಗಿ ಪಾರುವ ಸೊಂಪು |
ನೀರೆ ನಿನ್ನ ವಯವ ವಿನ್ಯಾಸದಿಂಪು || ೨

ತ್ರಿಜಗನ್ಮೂಲಾಧಾರ ಚಿದನಂತ ಸತ್ತ್ವದ |
ಸೃಜಿಸಿ ಲಾಲಿಸಿ ಜೀವನಾಟ್ಯವಾಡಿಸುವಾ ||
ನಿಜಶಕ್ತಿಗಳ ಶಸ್ತ್ರಶಾಲೆ ನಿನ್ನೊಡಲೇನೆ |
ಅಜಮಾಯೆಯವತಾರ ಸರ್ವಸ್ವ ನೀನೆ || ೩

ಕುಂದುವ ಕರಗುವ ನೊಂದುವೀ ಲೋಕದಿ |
ಎಂದೆಂದುಮಳಿಯದ ಸತ್ಯಮೊಂದಿಹುದು ||
ಸೌಂದರ್ಯವದರ ಪ್ರಭಾವವೆಂದೆನ್ನುವ |
ಗಂಧರ್ವಾಪ್ಸರಕಲಾ ಸಂದೇಶಕೃತಿ ನೀನು || ೪

ಗೆಜ್ಜೆ ಕಿಂಕಿಣಿಗಳ ನಿಸ್ವಾನ ಸ್ವನ ಮಿಗೆ |
ಮದ್ದಲೆ ತಾಳದ ತದ್ಧಿಮಿ ಧಿಮಿಗೆ ||
ಹೃದ್ಯಾಂಗಭಂಗಿಗಳಾ ಪ್ರತಿಸಂಜ್ಞೆಗೆ |
ಮಾದ್ಯನಾಗನೆ ನಮ್ಮ ಮುದ್ದುಕೇಶವ ದೊರೆ || ೫



## ಲಾಸೋತ್ಸವೆ

ಭಜಿಸುವಳೇಂ ಕೇಶವನಂ |
ವಿಜಯೋತ್ಸವ ಗೀತ ನೃತ್ಯವಾದ್ಯಗಳಿನಿವಳ್ ||
ಧ್ವಜಿನಿಯಿವಳ್ ಸ್ತ್ರೀಸೃಷ್ಟಿಗೆ |
ವಿಜಿತಾಹಂಕಾರಿ ವಲ್ಲಭಾರ್ಪಿತ ಚೇತಳ್ ||

# ೪೨. ಲಾಸೋತ್ಸವೆ

ರಾಗ—ಶಾಹನ] [ತಾಳ—ಮಿಶ್ರಚಾಪು

ಏಸು ಕಾಲ ನೀಂ ಕಾಯುವೇ - ಲಾಸೋತ್ಸವೇ || ಪ.

ಕೇಶವ ಬರುವನೆಂ-ಬಾಸೆಯ ಭರದಲಿ |
ಬೇಸರ ವಡದೆ ಆ-ಯಾಸವ ತಾಳುತೆ || ಅ. ಪ.

ಊಳಿಗಕೇಂ ಮಿತಿಯಿಲ್ಲವೇ - ಈ ಲೋಕದಿ |
ಕೇಳಿ ನೀತಿಯ ಪೇಳ್ವರಿಲ್ಲವೇ - ಪ್ರತೀಕ್ಷಣೆ ||
ಆಳುವ ದೊರೆ ನಿನ್ನ - ತಾಳುಮೆಯೆನಿತೆಂದು |
ಆಳವನಳೆವವೋಲ್ - ಕಾಲವ ಕಳೆವನೆ || ೧

ಕೇಳಿಯೊಳ್ ಮನಸಿಲ್ಲವೇನ್ - ಆ ಸ್ವಾಮಿಗೆ |
ವೇಳೆಗೊತ್ತುಗಳೇನಿಲ್ಲವೇನ್ - ಲೋಲಾಂಬಕೆ ||
ಬಾಲೆ ನಿನ್ನಯಾ ಪದ-ತಾಳ ಝುಂಕಾರವ- |
ನಾಲಿಪ ಸುಖದೊಳೇ - ಲೋಲನಾದನೇಂ ದೊರೆ || ೨





ಶುಕ ಸಖಿ

ಶುಕಿಯೇಂ ಸಖಿಯಿಂದಾಪ್ತಳೆ |
ವಿಕಸಿತ ಸುಮವದನೆ ಬೇಸರವೆ ಮನುಕುಲದೊಳ್ ||
ವಿಕಟವ ಗೆಯ್ದನೆ ವಲ್ಲಭ- |
ನಕಲಂಕಿತೆ ಸೈಸು ವಿರಲವಿಶ್ರಮಿಯಾತಂ ||

## ೪೩. ಶುಕ ಸಖಿ

ರಾಗ—ಹಂಸಧ್ವನಿ] [ತಾಳ—ತ್ರಿಶ್ರ ಏಕ

ಸರಸವಾಡೆ ಕೆಳೆಯನೆತ್ತಲರಸಿ ತಂದೆಯೇ |
ಅರಗಿಣಿಯಾ ನುಡಿಯ ಕೇಳಿ ಮರುಳುಗೊಂಡೆಯೇ ‖ ಪ.

ಬೆಡಗ ನೋಳ್ಪರಿರದೆ ನಿನಗೆ ಬೇಸರಾದುದೇ |
ನುಡಿಯ ಕೇಳ್ವರಿರದೆ ಮನಸು ರೋಸಿಪೋದುದೇ ‖
ಕಲಿಸಿದುಲಿಯನುಲಿಯುವ ಗಿಣಿ |
ತಿಳಿಯಲಹುದೆ ನಿನ್ನ ಮನವ ‖ ೧

ಕಾದು ನೋಡುತಿಹನು ನಿನ್ನ ಚೆನ್ನಕೇಶವಂ |
ಆದಿಮೂಲನವನೆ ಸೊಬಗನೆಲ್ಲ ಸೂಸುವಂ ‖
ಶುಕಭಣಿತದಿ ಪಿಕಮಣಿತದಿ |
ಸಕಲ ಜಗದ ರುಚಿಯೊಳವನೆ ‖ ೨





ಉಲ್ಲಾಸಿನಿ

ಅನಂತಕಾಲಾಯತ ತೇಜಮೊಂದು ತಾ-|
ನನನ್ಯ ಲಾವಣ್ಯರಸ ಪ್ರವಾಹದೀ ||
ಕ್ಷಣೈಕ ಮಾತ್ರಾನುಭವ ಪ್ರತೀಕದೊಳ್ |
ಘನಿಷ್ಠಮಾಗಿರ್ಪುದು ಲೋಕಪುಣ್ಯದಿಂ ||

# ೪೪. ಉಲ್ಲಾಸಿನಿ

ರಾಗ– ಸಾರಂಗ] [ತಾಳ—ಮಿಶ್ರ ಚಾಪು

ಆವ ಜೀವಕೆ ಶೂಲ - ಆವ ಮೀನಿಗೆ ಗಾಳ |
ಆವ ಹಕ್ಕಿಗೆ ಜಾಲವೇ - ನೀನೋ ಬಾಲೆ ‖ ಪ.

ಹಾವಭಾವಾಸ್ತ್ರ-ಪ್ರಭಾವದಿನಾಳುವ |
ದೈವಾಧಿಕಾರಿಯೆ ನೀನ್ - ಸುಶೀಲೆ ‖ ಅ. ಪ.

ಕುಂಚಿತಚರಣ ಹೃದಂಚಿತಕರಚಿಹ್ನ |
ಚಂಚಲನಯನ ಪ್ರಪಂಚಿತಹಸನ ‖
ಕಾಂಚೀಸ್ವನನವೆಂಬೀ ಪಂಚಶರದೆ ನೀಂ |
ವಂಚಿಸ ಬಂದೆಯ ಚೆನ್ನಕೇಶವನ ‖ ೧





ಭಾವದೇವಿ

ಭಾವದೇವತೆ ಕಾವ್ಯಗಾಯನ ನೃತ್ತ ಶಿಲ್ಪಕ ಕಲ್ಪನಾ-|
ಜೀವಮಾತೃಕೆ ವಿಶ್ವಕೃತ್ಪ್ರತಿಭಾಪ್ರತೀಕೆ ಕಲಾತ್ಮಿಕೇ ||
ದೇವ ಮಾನವರೊಳ್ ಪರಸ್ಪರ ಸಖ್ಯಸೇತು ವಿಧಾಯಿನೀ |
ಸ್ತ್ರೀವಿಲಾಸದ ಸೀಮೆ ನೀನೆಲೆ ಕೇಶವೇಶ್ವರ ಮೋಹಿನೀ ||

# ೪೫. ಭಾವದೇವಿ

ರಾಗ—ಸಾವೇರಿ] [ತಾಳ—ಮಿಶ್ರಚಾಪು

ಆವ ದೇವಿಯೆ ನೀನು - ಭೂವೈಭೋಗಕೆ ಬಂದೆ |
ಊರ್ವಶಿ ಮೇನಕೆ-ರಂಭೆಯರಂತೆ ‖ ಪ.

ಜೀವಸಂಕುಲದೆಲ್ಲ - ಭಾವಂಗಳುದಯುದ |
ತಾವಿದು ಕಾಣೆಯ - ದೇವ ಕೇಶವನೆಡೆ ‖ ಅ. ಪ

ಬಾಹುವಿನ್ಯಾಸವೊ - ಮೋಹದ ವದನವೋ |
ನೇಹದ ನಯನದ - ಶೋಭಾ ಪ್ರಚುರವೋ ‖
ಈಹಾ ಸಹಸ್ರಕ - ದಾಹಿಸೆ ಲೋಕವ |
ಊಹೆ ಮುಟ್ಟದ ನಿನ್ನ - ಸಾಹಸ ತಾನೇನೆ ‖

ನಿತ್ಯದೀ ಸಂಸಾರಲೀಲಾ-|
ನೃತ್ಯದಲಿ ಸೃಷ್ಟಿಯ ವಿಚಿತ್ರದ ‖
ತತ್ವವಿವರಣಯತ್ನದಿಂ ಸಂ-|
ತೃಪ್ತಳೇ ನೀಂ ಭಾವದೇವತೆ ‖ ೧





ವೇಣೀ ಸಂಹಾರೆ

ದುರುಳಂ ಮಡಿಯದೆ ನಾನೀ |
ಕುರುಳಂ ಪೆಣಿಲಿಕ್ಕೆನೆಂಬ ಶಪಥವ ನಿನ್ನಿಂ ||
ಅರಿತಾಡಿದಳೇಂ ದ್ರೌಪದಿ |
ಗುರು ನೀಂ ವೀರೆಯರಿಗಂ ವಿಹಾರಿಯರಿಂಗಂ ||

ಕೇಶವಾಮೋದ ರಾಸಿಕ್ಯಂ ಕೈಶಿಕೀರಾಗ ಕಾರಣಂ |
ಕೈಶಿಕೀರಾಗ ರಾಸಿಕ್ಯಂ ಕೇಶವಾಮೋದ ಕಾರಣಂ ||

## ೪೭. ನೃತ್ಯ ಸರಸ್ವತಿ

**ರಾಗ—ಆರಭಿ ಅಥವಾ ದರ್ಬಾರು]** **[ತಾಳ—ಮಿಶ್ರಚಾಪು**

ನೃತ್ಯ ಸರಸ್ವತಿ - ಸತ್ಯಲೋಕವಿಭೂತಿ |
ನಿತ್ಯ ಚಿದ್ರಸಿಕಾಕೃತಿ - ಕಲಾದ್ಯುತಿ ‖ ಪ.

ಅತ್ಯಂತ ಹಿತರೂಪೆ - ಪ್ರೀತ್ಯಾಸ್ಪದಾಲಾಪೆ |
ತತ್ತ್ವಬೋಧನ ಮೋದಿನೀ - ಆಮೋದಿನಿ ‖ ಅ. ಪ.

ಪದಮಾತ್ರ ತಾನೆಂತು - ಹೃದಯೇಂಗಿತಂಗಳ |
ವಿದಿತವಾಗಿ ಪುದರ್ಥ-ಚ್ಯುತಿಯಾಗದಂತೆ ‖
ಒದವಿ ಕೂಡಿರೆ ರಾಗ-ಹದದಿಂದಾಂಗಿಕಸಂಜ್ಞೆ- |
ಯುದಿಪುದಾಗಳೆ ಪೂರ್ಣ-ವಿಧದಿಂದಾತ್ಮವಿಲಾಸ ‖ ೧

ಚಿತ್ತಹಿಮಾಚಲ-ತೀರ್ಥತ್ರಿವೇಣಿಯ |
ಪ್ರತ್ಯಕ್ಷರೂಪಿದು - ಹೃದ್ಬಾಷ್ಯಮೂರ್ತಿ ‖
ಮುಕ್ತಿಯಿದಾತ್ಮಕ್ಕೆ - ರಕ್ತಿ ರಸಜ್ಞರ್ಗೆ |
ಯುಕ್ತದರ್ಶನೆಯಿದು - ಚೆನ್ನಕೇಶವನಿಗೆ ‖ ೨





## ನೃತ್ಯೋನ್ಮತ್ತೆ

ಶುಭಾಂಗಿ ಲೋಲಲೋಚನೇ |
ತ್ರಿಭಂಗಿ ಬಂಧುರಾಂಗನೇ ||
ಸ್ವಭಾವ ಕೋಮಲೇಂಗನೇ |
ಅಭೀಷ್ಟನಾರೆ ಲಾಸನೇ ||

# ೪೮. ನೃತ್ಯೋನ್ಮತ್ತೆ

ರಾಗ—ಪುನ್ನಾಗವರಾಳಿ] [ತಾಳ—ಏಕ

ನೃತ್ತದ ರಭಸವಿದೇನೇ - ಎಲೆ |
ಮತ್ತೇರಿ ಮೆಯ್ಯ ನೀ ಮರೆತಿಹೆಯೇನೆ ||
ಚಿತ್ತಜನಾವೇಶವೇನೇ - ನಿನ್ನ |
ಪುತ್ತಳಿಯೊಡಲೇನು ಬಳಲದೆ ಬಾಲೆ || ಪ., ಅ. ಪ.

ತದ್ಧಿಮಿ ತಕಧಿಮಿ ಥೈಯಾ ತಾ |
ತಜ್ಝಣು ತೋಂ ಝುಣುರೆನುತಾ ||
ವಿದ್ಯಾಧರಾನಂದ ಭರಿತಾ - ಇದು |
ಮುದ್ದುಮೋಹನೆ ನಿನ್ನ ಬೆಡಗಿನ ಕುಣಿತಾ || ೧

ಗೆಜ್ಜೆಯ ಘಲಿಘಲಿ ಘಲಿರೂ - ನಿನ್ನ |
ಹೆಜ್ಜೆಯ ತಾಳದ ಥೈಥಕ್ಕರೆಗರೂ ||
ಕಜ್ಜಲ ನಯನದ ಪೊಗರೂ - ನೋಡೆ |
ಹೃದ್ಯವೆ ಚೆನ್ನಕೇಶವನಿಗೆ ಮಿಗಿಲು || ೨



## ೪೯. ವಿರಹಾರ್ತೆ

ರಾಗ—ಖರಹರಪ್ರಿಯ] [ತಾಳ—ಆದಿ

ನಾಥನೇಂ ಮುನಿದನೆ - ಮಾತನೇ ತೊರೆದನೆ |
ಏತಕೀ ವಿರಹವೆ - ಪ್ರೀತಿಪ್ರಮೋದನೆ || ಪ.

ಪ್ರಣಯ ಸಲ್ಲಾಪಂಗಳೊಳ್ - ವಿನಯವನೇಂ ಮೀರ್ದೆಯ |
ಮನಸಿನಿಂಗಿತಾರ್ಥವಂ - ಗಣಿಸದೆ ಬಿಟ್ಟೆಯ ||
ಅನುರಾಗಕಾಂಕ್ಷಿಯಿಂ - ಪಣವ ನೀಂ ಕೇಳ್ದೆಯ |
ಕನಲಿರ್ಪುದೆಂತೆ ನಿ-ನ್ನಿನಿಯ ಕೇಶವೇಶ್ವರಂ || ೧



# ೫೦. ಚಾರುಹಾಸಿನಿ

ರಾಗ—ಅಸಾವೇರಿ] [ತಾಳ—ಮಿಶ್ರಚಾಪು

ಕರೆದವರಾರೇ ಓ - ತರುಣೀ ಇಲ್ಲಿಗೆ ನಿನ್ನ |
ಪರಿಷೆಯೊಳಾರನಾ-ದರಿಸುವರಾರೇ || ಪ.

ಕೇಳುವ ದೊರೆಯಿಲ್ಲ - ಕೇಳಿಗೆ ಕಳೆಯಿಲ್ಲ |
ತಾಳಮೇಳಗಳೆಲ್ಲ - ಗಾಳಿ ಪಾಲಾಯಿತೆ || ಅ. ಪ.

ಚಾರುಹಾಸಿನಿ ಕೇಳೆ - ನೂರು ಚೆಲ್ವೆಯರಿರೆ |
ತಾರತಮ್ಯದ ತಿಳಿ-ವಾರ ಕಣ್ಗೆಹುದೇ ||
ಕೋರಿ ನೀನರಸುವಾ - ಸಾರಜ್ಞನೇತಕೋ |
ದೂರದೊಳೇ ನಿಂತು - ಗಾರುಡಿಗೈವನೆ || ೧

ದೇಶದೇಶಗಳ ವಿ-ಲಾಸಿನಿಯರ ಸಂತೆ |
ರಾಸಕೋಲಾಹಲ-ತುಮುಲದ ಕಂತೆ ||
ವಾಸವನೋಲಗ-ಕಿಂತಿದು ಮಿಗಿಲಂತೆ |
ಕೇಶವ ರಾಜೇಂದ್ರ-ನಂತಃಪುರವಿದಂತೆ || ೨



# ೫೧. ಪ್ರಣಯವಂಚಿತೆ

**ರಾಗ—**ಸಾದನಾಮಕ್ರಿಯೆ]                    [ತಾಳ—ಮಿಶ್ರಚಾಪು

ಮೋಸ ಗೆಯ್ದನೇ ಕೆಳದೀ - ಕೇಶವರಾಯ ||    ಪ.

ಆಶೆಯ ತೋರಿ ಸಾ-ವಾಸಕೆ ಬಾರದೆ ||    ಅ. ಪ

ಕುಡಿನೋಟಗಳ ಬೀರಿ - ನಿಡಿದುಸಿರ್ಗಳ ಸಾರಿ |
ಪಿಡಿದೆನ್ನ ಸೆರಗನು - ನುಡಿದೊಸಗೆಯನು ||
ಮಿಡಿವೆನ್ನ ಮನಸಿಗೆ - ದೃಢದ ನಂಬಿಕೆಯಿತ್ತು |
ಕಡೆಗೆ ತಾನೆತ್ತಲೋ - ಕಡುಮಾಯವಾದನೆ ||    ೧

ಕೆಳದೀ ಪೇಳುವುದೇನೆ - ಒಲವಿನಾ ಕಥೆಯಿಷ್ಟೇ |
ಮಲರ ಸಸಿಯಿನೆಳೆದು - ನಲುಚೀ ಎಸೆವುದೇ ||
ಬಳಗ ನೂರಿರ್ಪರಾ - ಚೆಲುವ ಬಿಕಾಲಿಗೆ |
ಕಲಿತು ನ್ಯಾಯವನವಂ - ಬರುವಂದೆ ಬರಲಮ್ಮ ||    ೨



# ೫೨. ಕಲಹಾಂತರಿತೆ

ರಾಗ—ಹುಸೇನಿ] [ತಾಳ—ಮಿಶ್ರಚಾಪು

ಮುಳಿದನೇ - ಸಖೀ - ಮುಳಿದನೇ ‖ ಪ.

ಮುಳಿದನೆ ಸಖಿ ಪೇಳೆ - ಚೆಲುವ ಕೇಶವರಾಯ |
ಸುಳಿದಾಡನೇಕಿಲ್ಲಿ - ಕಲಹವದಾರಲ್ಲಿ ‖ ಅ. ಪ.

ಮರೆಯಿಂದಿಣಿಕಿನೋಡಿ - ಸರಸಸಂಜ್ಞೆಯ ನೀಡಿ |
ಪರಿಪರಿಯುಸುಸಯ-ವಚನಂಗಳಾಡಿ ‖
ಕರೆದು ನಾಂ ಬಾರೆನ್ನು-ತಿರಲಾಗ ಸರಿದೋಡಿ |
ವಿರಸ ಗೈವುದದೊಂದು - ಹಿರಿಮೆಯ ಗುರುತೇನೆ ‖ ೧

ಪ್ರಣಯದ ಹಾಸ್ಯವ - ರಣಭೀಷಣವ ಮಾಡಿ |
ಮನದೊಳೇನನೊ ತಾನೆ - ನೆನೆದೆನ್ನ ದೂಡಿ ‖
ಬಿನದದೊಳ್ ಅವನೇಕೆ - ಕನಲಿ ಕೆರಳ್ದನೆ |
ಮುನಿಸಿಗೆನ್ನೆಡೆಯೊಳೇ-ನಿನಿಮದ್ದಿಲ್ಲವೆ ‖ ೨

ಮುಳಿದರೆ ಮುಳಿಯಲಿ - ಇಳೆಯೊಳಗಿನ್ನೇನು |
ಬೆಳಗಾಗದಿರ್ಪುದೆ - ಸುಳಿಯದೆ ಗಾಳಿ ‖
ಇಳಿಯದೆ ಬಿಸಿ ಮತ್ತೆ - ಕೆರಳದೆ ಹಸಿವಿನ್ನು |
ಒಳಿತಾಗದಿರ್ಪುದೆ - ಮಲರಂಬು ಕೆಳೆಯಿರೆ ‖ ೩



## ೫೩. ವಿಲಾಸಿಕೆ

**ರಾಗ—ಮುಖಾರಿ]** [ತಾಳ—ಮಿಶ್ರಚಾಪು

ಕೊರಗದಿರೆಲೆ ಬಾಲಿಕೇ - ವಿಲಾಸಿಕೆ |
ಮರುಗದಿರೆಲೆ ಶಾರಿಕೇ - ಓ ಲಾಸಿಕೆ ‖ ಪ.

ಚಿರಕಾಲ ಗೈದಿಹ - ಸರಸ ತಪಸ್ಯಕೆ |
ವರವ ನೀಂ ಬೇಳ್ಪೊಡೆ - ಮರುನುಡಿಯುವರಾರೆ ‖ ಅ. ಪ.

ಎಷ್ಟು ನೀಂ ಕಾದೊಡ-ಮಿಷ್ಟೇ ನಿನ್ನಯ ಪಾಡು |
ಇಷ್ಟ ಚೆನ್ನಿಗ ತಾನ್ ಅ-ದೃಷ್ಟರೂಪಿಯಲೇ ‖
ಶ್ರೇಷ್ಠಕಲಾರಸ-ವೃಷ್ಟಿಯಿಂ ಲೋಕ ಸಂ- |
ತುಷ್ಟಿ ಗೈವುದೆ ನಿನ್ನ - ಸೃಷ್ಟಿಗೆ ಫಲವಲ್ತೆ ‖ ೧



# ೫೪. ನೃತ್ತಹಾಸಿನಿ

ರಾಗ—ಶ್ರೀರಂಜನಿ] [ತಾಳ—ಆದಿ

ನೃತ್ತಹಾಸಿನೀ - ಮತ್ತಕಾಶಿನೀ |
ಚಿತ್ತಜೋತ್ಸವ - ಪ್ರತ್ಯವೇಕ್ಷಿಣೀ ‖ ಪ.

ರನ್ನ ದಿಂಬಿನಾ - ಕೆನ್ನೆ ಗೆಂಪನು |
ಹೊನ್ನಿ ನೆಸಕದಾ - ನುಣ್ಣ ಮೆಯ್ಯನು ‖
ಕನ್ನೆ ನಿನ್ನಯಾ - ಕಣ್ಣ ಸನ್ನೆಯಂ |
ಬಲ್ಲನೇನವಂ - ಚೆನ್ನ ಕೇಶವಂ ‖ ೧

ಕನ್ಯಕಾಮಣೀ - ಪುಣ್ಯಕಾಮಿನೀ |
ಸ್ವರ್ಣಕಿಂಕಿಣೀ-ಶಿಂಜಿತಸ್ವನೀ ‖
ಪೂರ್ಣಸುಖಮಯಂ - ತೂರ್ಣಕರುಣೆಯಿಂ |
ನಿನ್ನ ವರಿಸುವಂ - ಚೆನ್ನ ಕೇಶವಂ ‖ ೨



# ೫೫. ಚಕ್ರವಾಕಿ

ರಾಗ—ಚಕ್ರವಾಕ] [ತಾಳ—ಆದಿ

ಇನ್ನುಮೇಕೆ ಬಾರನೇ - ಏನುಪೇಕ್ಷೆ ಧೋರಣೇ |
ಅನ್ಯಚಿಂತೆಯಾಂತನೇ - ಚೆನ್ನಿಗಂ ಪ್ರಮತ್ತನೇಂ ‖ ಪ.

ಮುಳಿಸೇನೊ ಎನ್ನೊಳು - ಛಲವೇನೊ ತನ್ನೊಳು |
ಒಲು ನಲ್ಮೆಯವನೆಂದು - ಗಳಹಿದ್ದೆಯಲ್ಲೆ ನೀಂ ‖ ಅ. ಪ.

ಪಾಪವೇನ ಗೈದೆನೋ - ಶಾಪವಾರು ಕೊಟ್ಟರೋ |
ತಾಪವೆನ್ನ ಪಾಡಾಯಿತೇ - ಪೋಪುದೆಲ್ಲಿಗೇ ಸಖೀ ‖ ೧

ಚಕ್ರವಾಕಿವೋಲು ನಾಂ - ವಿಕ್ಲಬಾರ್ತೆಯಾದೊಡಂ |
ಚಕ್ರವರ್ತಿ ಕೇಶವಂ - ಸುಪ್ರಸನ್ನನಾಗನೇಂ ‖ ೨

ಸಾಕೂತಲೋಚನಂ - ಲೋಕಪ್ರಮೋಹನಂ |
ಏಕಿಂತು ಕಾಡಿಪ್ಪನೇ - ಶ್ರೀ ಕೇಶವಂ ಜಾಣೆ ‖ ೩



## ೫೬. ಪ್ರಣಯ ಕುಪಿತೆ

ರಾಗ—ಉದಯರವಿಚಂದ್ರಿಕೆ] [ತಾಳ—ಆದಿ

ಮರುಳನೇನವಂ - ದುರುಳನೇನವಂ |
ಪರಿಸೆ ಬಾರದಾ - ಚೆನ್ನ ಕೇಶವಂ ‖ ಪ.

ವರುಷ ನೂರರಿಂ - ಸ್ಥಿರದೊಳೆನ್ನ ನೀ |
ತೆರದಿ ಕಾಯಿಸಿಟ್ಟು - ಮರೆತು ಪೋದನೇನೆ ‖ ಅ. ಪ.

ಸರಸದಾಶೆಯಂ - ಕೆರಳಿಸಿರ್ದ್ದ ತಾಂ |
ಮರಳಿ ಬಾರದಿಂತು - ವಿರಮಿಸಿರ್ಪ್ಪದೇಂ ‖
ಅರಿಯನೇನವಂ - ಮರಿಯಾದೆ ಬಗೆಯ |
ಮುರಿವುದೆಂತೆ ಆ - ಗರುವಿಯುಬ್ಬರವ ‖ ೧

ಕಪಟಿಯೇನವಂ - ಕೃಪಣನೇನವಂ |
ಚಪಳನೇನವಂ - ನಿಪುಣೆ ಪೇಳೆ ನೀಂ ‖
ಕುಪಿಸಿ ಪೋದನೋ - ತಪಿಸಿ ಸೋತನೋ |
ನೆಪವದೇನೊ ಆ - ಅಪರಾಧವೇನೋ ‖ ೨



# ೫೭. ಲತಾಂಗಿ

ರಾಗ—ಲತಾಂಗಿ] [ತಾಳ—ಮಿಶ್ರಚಾಪು

ಗೆಲಿದೌ ಲಲಿತಾಂಗೀ - ಲತಾಂಗೀ || ಪ.
ಲಾಲಿಸಿ ಈ ಲೋಕವ - ಲೀಲಾನಯಲೋಲಾಂಗದಿಂ || ಅ. ಪ.

ಹೃದಯವಾರಿಧಿಯ ನೀಂ - ಕಡೆದಭಿನಯದಿಂ |
ಮಧುರ ಗಾಯನದಿಂದೆ - ಗಳಿಸಿದೆ ಸುಧೆಯಂ ||
ರೂಪ ಕಾಂತಿಗಳಿಂದೆ - ತೋಳಿನ |
ಬಳ್ಳಿ ಬಳುಕುಗಳಿಂದೆ - ಕಾಲಿನ ||
ತಾಳ ಮೇಳಗಳಿಂದೆ - ವದನದ |
ಹಾವ ಭಾವಗಳಿಂದೆ - ಭುವನವ || ೧

ಜಗದ ಕಟ್ಟಡವಿಯೊಳ್ - ಭವದ ಕತ್ತಲೆಯೊಳ್ |
ಸೊಗದ ದೀವಿಗೆ ತೋರಿ - ಸವಿಯೂಟವಿಡುವೆ ||
ಜೀವಯಾತ್ರೆಯ ಚರಿಪ ಚರಣದಿ |
ತೀವಿಸುವೆ ಸೋತ್ಸಾಹ ಬಲವನು ||
ರಾಸಕೇಳೀ ರಸವಿಲಾಸಿನಿ |
ಕೇಶವಾಂತಃಪುರ ನಿವಾಸಿನಿ || ೨



## ೫೮. ಸೌಂದರ್ಯ ವಿಜಯ

ಜಯ ವಿಜಯ ಚೆನ್ನಕೇಶವ |
ಜಯ ಲಲಿತ ಕಲಾ ವಿಲಾಸ ಚಕ್ರಾಧಿಪತೇ ||
ಜಯವಂ ಕರುಣಿಸು ನಿನ್ನೀ |
ದಯಿತೆಯರಾಕೂತ ಸಂಜ್ಞಿತಂಗಳಿಗೆಂದುಂ || ೧

ಬೆರೆಯಿಸಿ ಚಿತ್ತವ ರುಚಿಯೊಳ್ |
ಮರೆಯಿಸಿ ಮಿಕ್ಕೆಲ್ಲ ಲೋಕಮಂ ತನ್ನನುಮಂ ||
ಪೆರತೊಂದನುಮೆಳಸಿಸದಾ |
ಪರಜೀವಸಮಾಧಿಯಲ್ತೆ ಸೌಂದರ್ಯಕೃತಂ || ೨

ನ್ಯೂನಾಂಶದಿಂ ಲೋಕದಿ ತೋರ್ಪ ಸುಂದರಂ |
ಪೂರ್ಣಂ ವಿಭೋ ನಿನ್ನೊಳಗಲ್ತೆ ಕೇಶವಾ ||
ಉನ್ಮೀಲಿತಾಕ್ಷರ್ ವರ ನಿನ್ನದೆಸ್ಸು ತೀ |
ಹೃನ್ಮಾಧುರೀಸಾರವನೀಂಟೆ ಧನ್ಯರೈ || ೩

ನೀಡೀ ಜನರ್ಗಚ್ಛದ ನೇತ್ರ ದೀಪ್ತಿಯಂ |
ಮಾಡಾರ್ದ್ರರಂ ಹಾರ್ದಿಕ ಧರ್ಮ ಚರ್ಯೆಯೊಳ್ ||
ಕೂಡಿರ್ಕವರ್ ನಿನ್ನನೆ ಲೋಕಭೋಗದೊಳ್ |
ನಾಡೋಜ ನೀನಾಗಿರು ಚೆನ್ನಕೇಶವಾ || ೪

ಸಾಂದ್ರಾಮೋದ ಪ್ರಭಾಕರ್ಷಣಗಳಿನೆಳೆದಿ-
ಟ್ಟಿಂದ್ರಿಯ ಗ್ರಾಮಮಂ ತತ್-|
ಕೇಂದ್ರಾಧಿಷ್ಠಾನದೊಳ್ ಜೀವವ ಸುಖರಸ ತ-
ಲ್ಲೀನಮಂ ಗೆಯ್ದು ವಾಂಛಾ-||
ಬಂಧಂ ವಾಂಛಾಕರಂ ವಾಂಛಕನಿವು ಕರಗಲ್
ಮೂರನೈಕ್ಯಂಗೊಳಿಪ್ಪಾ |
ಸೌಂದರ್ಯಾದ್ವೈತಯೋಗಂ ಜಯಿಸುಗೆ ಜಗದೊಳ್
ಕೇಶವಾವಾಸ್ನಾಯರಾಗಂ || ೫

# ೫೯. ಜಯ ವಿಶ್ವಮೋಹನ

**ರಾಗ—ಕುರಂಜ]** **[ತಾಳ—ತ್ರಿಶ್ರರೂಪಕ**

ಜಯ ವಿಶ್ವಮೋಹನನೆ - ವಿಜಯ ನಾರಾಯಣನೆ |
ಜಯ ಸರ್ವಪಾವನನೆ - ಜಯಿಸು ಜಯಿಸು || ಪ.

ಜಯ ಮಂಗಳಾಕಾರ - ಜಯ ಸೌಮ್ಯಗಂಭೀರ |
ಶೃಂಗಾರ ಸಂಸಾರ - ಸಂಗೀತ ಸಾರಾ ||
ಜಯ ಜೀವಿತರಹಸ್ಯ - ಪರಮಾನುಭವವಿವಶ್ಯ |
ಜಯ ಮಂಜುಹಸಿತಾಸ್ಯ - ಜಯ ಸರಸಲಾಸ್ಯ || ೧

ಜಯ ಜಯಾ ಜಯತು ಜಯತು ||

ಚೆನ್ನಕೇಶವಮೂರ್ತಿ - ಶಿಲ್ಪ ಚಿತ್ರಸ್ಫೂರ್ತಿ |
ವಿಷ್ಣುವರ್ಧನಕೀರ್ತಿ - ಕವಿತಾಗ್ರವರ್ತಿ ||
ಕರ್ಣಾಟಜನಕಾಂತಿ - ಭವತಾಪ ವಿಶ್ರಾಂತಿ |
ಸೌಂದರ್ಯ ಸಿದ್ಧಾಂತಿ - ಜಯತು ಜಯತು ||

ಜಯ ಜಯಾ ಜಯತು ಜಯತು || ೨



# ೬೦. ಮಂಗಳಂ

ರಾಗ—ಮಧ್ಯಮಾವತಿ] [ತಾಳ—ಆದಿ

ಶ್ರೀ ವಿಷ್ಣು ಸಮ್ -ರಾಜ್ಞೀ ಮಂಗಲಂ |
ಶಿವಮಸ್ತು ಸಕಲಂ || ಪ.

ಸೌಮ್ಯನಾಯಿಕೇ - ಸಕಲ ಕಲಾತ್ಮಿಕೆ |
ವಿಶ್ವಜೀವ ಸೌ-ಭಾಗ್ಯ ವಿಧಾಯಿಕೆ || ಅ. ಪ.

ಮಾಯೇ - ಬ್ರಹ್ಮಾಂಡ ಚಿತ್ರ ಸಮುದಾಯೇ |
ನಾನಾ ಶಕ್ತಿದ್ಯುತಿ ಕಾಯೇ - ಕಮನೀಯೇ ||
ಜೀವ ಜೀವ ಸಂಸರ್ಗ ರಸಕ್ರಿಯೆ |
ನಿತ್ಯ ಭುವನ ಸಂಸಾರ ಮಹೋದಯೆ ||
ರೂಪ ನಾಮ ರಸ ರಾಗ ಭಾವ ಮಯೆ |
ಶ್ರೀಪರಮಾದಿಮ ಪೂರುಷ ಜಾಯೆ || ೧

ರಾಮೇ - ನಿಶ್ಶೇಷ ಭುವನ ಹೃತ್ಕಾಮೇ |
ಜೀವಾಂಕುರವಿಲಸತ್ ಪ್ರೇಮೇ - ನಿಸ್ಸೀಮೇ ||
ಸೌಮ್ಯಕೇಶವೈಶ್ವರ್ಯ ಶರೀರಿಣಿ |
ಸಾಂಸಾರಿಕ ಸಂತಾಪ ನಿವಾರಿಣಿ ||
ಸಾಮ್ಯ ಸರಸ ನಯ ಧರ್ಮ ನಿರೂಪಿಣಿ |
ರಮ್ಯ ಪರಾತ್ಪರ ತತ್ತ್ವ ನಿದರ್ಶಿನಿ || ೨

ಮಂಗಳಂ



ಶಾಂತಲಾದೇವಿ ಮತ್ತು ವಿಷ್ಣುವರ್ಧನ

# ಪದ್ಯಗೀತಗಳ ಮೊದಲ ಚರಣಗಳ ಅಕಾರಾದಿ

# ರಾಗಗಳ ಅಕಾರಾದಿ